CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಮೇ ೫, ೨೦೦೫ (ವೈಶಾಖ ೧೫, ಶಕ ವರ್ಷ ೧೯೨೭) | ಸಂಚಿಕೆ ೧೮

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ಸಹಕಾರ ಇಲಾಖೆ

### ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ರವರ ಕಾರ್ಯಾಲಯ

**ವಿಷಯ:** ಸಮಾಪನಾ ಆದೇಶಿತ ಸರ್ಕಾರಿ ಗಂಧದೆಣ್ಣೆ ಕಾರ್ಖಾನೆ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾ: ಇದರ ನೊಂದಣಿ ರದ್ದತಿ ಕುರಿತು.

**ಉಲ್ಲೇಖ:** 1. ಈ ಕಛೇರಿಯ ಆದೇಶ ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/46/2002-03/ ದಿನಾಂಕ:21.10.2002.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಪತ್ರ ನಂ:ಎಆರ್24/ಸಮಾಪನೆ/ರದ್ದತಿ/ಸಿಆರ್-32/ 2004-05 ದಿನಾಂಕ: 30.03.2005.

ಸರ್ಕಾರಿ ಗಂಧದೆಣ್ಣೆ ಕಾರ್ಖಾನೆ ಸಹಕಾರ ಸಂಘ ನಿ., ಶಿವಮೊಗ್ಗ ತಾಲ್ಲೂಕು ಈ ಸಂಘವು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಾರ್ಯಾಲಯದ ನೊಂದಣಿ ನಂ.ಎಆರ್‌ಎಸ್/38/89-90 ದಿನಾಂಕ:28.05.1989ರಲ್ಲಿ ನೊಂದಣಿಯಾಗಿದ್ದು, ಈ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕು ಮಟ್ಟಕ್ಕಿಂತ ಕಡಿಮೆಯಾಗಿರುತ್ತದೆ. ಈ ಸಂಘವು ತನ್ನ ಕಾರ್ಯಾಚರಣೆಯನ್ನು ಸ್ಥಗಿತಗೊಳಿಸಿದ್ದರಿಂದ ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಸಮಾಪನೆಗೆ ಆದೇಶಿಸಿದ್ದು, ಮಾರಾಟಾಧಿಕಾರಿ-1ನೇ ವೃತ್ತ ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯಾಗಿ ನೇಮಕ ಮಾಡಿದೆ. ಸಮಾಪನಾಧಿಕಾರಿಯವರು ದಿನಾಂಕ:21.10.2002 ರಂದು ಪ್ರಭಾರ ವಹಿಸಿಕೊಂಡು ಚರಾಸ್ತಿಯನ್ನು ವಿಲೇ ಮಾಡಿ ಸಂಘದ ಆಸ್ತಿ ಜವಾಬ್ದಾರಿಯನ್ನು ಶೂನ್ಯಗೊಳಿಸಿರುತ್ತಾರೆ. ಈ ಸಂಘದಲ್ಲಿ ಸರ್ಕಾರದ ಸಾಲ, ಸರ್ಕಾರದ ಷೇರು ಏನೂ ಇರುವುದಿಲ್ಲವೆಂದು, ಮತ್ತು ಸ್ಥಿರಾಸ್ತಿ ಇಲ್ಲವೆಂದು ವರದಿ ಮಾಡಿ ದಿನಾಂಕ:18.11.2004 ರಂದು ಅಂತಿಮ ಸಭೆ ನಡೆಸಿರುತ್ತಾರೆ. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಉಪ-ವಿಭಾಗದ ಸಹಾಯಕ ನಿಬಂಧಕರು, ಉಲ್ಲೇಖ(2)ರ ಪತ್ರದಲ್ಲಿ ನೊಂದಣಿ ರದ್ದತಿಗಾಗಿ ಶಿಫಾರಸ್ಸು ಮಾಡಿರುತ್ತಾರೆ.

ಶಿವಮೊಗ್ಗ ಉಪ-ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಉಲ್ಲೇಖ (2)ರಲ್ಲಿಯ ಶಿಫಾರಸ್ಸು ಅನ್ವಯ ಸರ್ಕಾರದ ಸಾಲ, ಷೇರು ಹಾಗೂ ಸ್ಥಿರಾಸ್ತಿ ಇಲ್ಲದೇ ಇರುವುದರಿಂದ ಹಾಗೂ ಆಸ್ತಿ ಜವಾಬ್ದಾರಿ ಶೂನ್ಯವಾಗಿರುವ ಕಾರಣ. ಈ ಸಂಘದ ಅಸ್ತಿತ್ವದಿಂದ ಸದಸ್ಯರಿಗಾಗಲಿ, ಸಾರ್ವಜನಿಕರಿಗಾಗಲೀ ಪ್ರಯೋಜನವಿಲ್ಲವೆಂದು ಮನಗಂಡು, ಸಂಘದ ನೊಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

### ನಂ.ಡಿಆರ್‌ಎಸ್/ಸಮಾಪನೆ/ಡಿಎಲ್‌ಎಸ್/46/2002-03/59, ದಿನಾಂಕ: 31ನೇ ಮಾರ್ಚ್ 2005

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯು/69/ಸಿಎಲ್‌ಎಂ/ 2000/ದಿನಾಂಕ:21.11.2001ರ ಅನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಆದ ನಾನು ಸರ್ಕಾರಿ ಗಂಧದೆಣ್ಣೆ ಕಾರ್ಖಾನೆ ಸಹಕಾರ ಸಂಘ ನಿ., ಶಿವಮೊಗ್ಗ, ಶಿವಮೊಗ್ಗ ತಾಲ್ಲೂಕು ಇದರ ನೊಂದಣಿ ನಂ.ಎಆರ್‌ಎಸ್/389/89-90/ದಿನಾಂಕ:28.2.1985ನ್ನು ತಕ್ಷಣ ಜಾರಿಗೆ ಬರುವಂತೆ ರದ್ದುಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಈ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡಿದೆ ಎಂದು ಪರಿಗಣಿಸತಕ್ಕದ್ದು. ಈ ಸಂಘದ ದಾಖಲಾತಿಗಳನ್ನು 3 ವರ್ಷಗಳ ಅವಧಿಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ರವರ ಕಛೇರಿಯಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ 31ನೇ ಮಾರ್ಚ್ 2005 ರಂದು ನನ್ನ ಸ್ವಹಸ್ತಾಕ್ಷರ ಮತ್ತು ಕಛೇರಿ ಮುದ್ರೆಯೊಂದಿಗೆ ಹೊರಡಿಸಿದೆ.

ಪಿ.ಆರ್. 611

ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಚಾಮರಾಜಪೇಟೆ, ಬೆಂಗಳೂರು - 560 018**

**ವಿಷಯ:** ಸಮಾಪನೆಯಲ್ಲಿರುವ ಹೊಸನಗರ ತಾಲ್ಲೂಕು ಕುಣಬಿ ಜನಾಂಗದ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಹೊಸನಗರ, ಶಿವಮೊಗ್ಗ ಜಿಲ್ಲೆ, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಆದೇಶ ಸಮ ಸಂಖ್ಯೆ: ದಿ:30.9.03.

2. ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರ ಪ್ರಸ್ತಾವೆ ಸಂಖ್ಯೆ: ಡಿಆರ್‌ಎಸ್:ಸಮಾಪನೆ: ಡಿಎಲ್‌ಎಸ್:38:2001-02 ದಿನಾಂಕ: 10.03.2005.

**ಪ್ರಸ್ತಾವನೆ:**

ಹೊಸನಗರ ತಾಲ್ಲೂಕು ಕುಣಬಿ ಜನಾಂಗದ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಹೊಸನಗರ, ಶಿವಮೊಗ್ಗ ಜಿಲ್ಲೆ, ಈ ಸಹಕಾರ ಸಂಘವು ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರ ಆದೇಶ ಸಂ.20/165/1998-99 ದಿ:16.9.98 ರಂತೆ ನೋಂದಣಿಯಾಗಿರುತ್ತದೆ. ಈ ಸಹಕಾರ ಸಂಘವು ತನ್ನ ಉಪನಿಯಮಗಳ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಹಾಗೂ ನಿಯಮಗಳು ಹಾಗೂ ಸರ್ಕಾರದ - ನಿಬಂಧಕರ ನಿರ್ದೇಶನಗಳಿಗನುಗುಣವಾಗಿ ಕೆಲಸ ನಿರ್ವಹಿಸದೇ 1999-2000ನೇ ಸಾಲಿನಿಂದ ಸ್ಥಗಿತಗೊಂಡಿರುವುದಾಗಿ ಜಿಲ್ಲಾ ಉಪನಿಬಂಧಕರಿಂದ ವರದಿ ಸ್ವೀಕೃತವಾದ ಪ್ರಯುಕ್ತ ಈ ಸಹಕಾರ ಸಂಘವನ್ನು ಉಲ್ಲೇಖ (1)ರ ಆದೇಶದಲ್ಲಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ಬಿ ರನ್ವಯ ಸಮಾಪನೆಯಲ್ಲಿರಿಸಿ, ಸಹಕಾರ ಅಭಿವೃದ್ಧಿ ಅಧಿಕಾರಿ, ಹೊಸನಗರ ತಾಲ್ಲೂಕು ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸದರಿ ಸಮಾಪನಾಧಿಕಾರಿಯವರು ದಿ:18.3.2001 ರಂದು ಸಂಘದ ಪ್ರಭಾರ ವಹಿಸಿಕೊಂಡಿರುತ್ತಾರೆ.

ಪ್ರಭಾರ ವಹಿಸಿಕೊಂಡ ಸಮಾಪನಾಧಿಕಾರಿಯು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಸಿ) ಅನ್ವಯ ಆದ್ಯತಾ ಪಟ್ಟಿ ತಯಾರಿಸಿದ್ದು, ಅದರಂತೆ ಸಂಘದ ಆಸ್ತಿ-ಜವಾಬ್ದಾರಿಗಳನ್ನು ವಿಲೇಗೊಳಿಸಲು ಕ್ರಮವಿಟ್ಟಿರುತ್ತಾರೆಂದು, ಸಂಘದ ಆಸ್ತಿ-ಜವಾಬ್ದಾರಿಗಳನ್ನು ಶೂನ್ಯಗೊಳಿಸಿರುವುದರಿಂದ ಕಲಂ 75ರನ್ವಯ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವಂತೆ ಉಲ್ಲೇಖ (2)ರಲ್ಲಿ ಪ್ರಸ್ತಾವೆ ಸ್ವೀಕೃತವಾಗಿರುತ್ತದೆ.

ಪ್ರಸ್ತಾವೆಯನ್ನು ಪರಿಶೀಲಿಸಲಾಗಿ, ಸಂಘದಲ್ಲಿ ಸರ್ಕಾರದ ವಿನಿಯೋಗಗಳು ಯಾವುದು ಇರುವುದಿಲ್ಲ. ಸಂಘದಲ್ಲಿನ ಪೀಠೋಪಕರಣಗಳನ್ನು ಬಹಿರಂಗ ಹರಾಜಿನ ಮುಖಾಂತರ ಮಾರಾಟ ಮಾಡಿದ್ದು, ಇದರಲ್ಲಿ ಬಂದ ಮೊಬಲಗು ರೂ.2500/-ಗಳನ್ನು ಜವಾಬ್ದಾರಿ ತೀರುವಳಿಗಾಗಿ ವಿನಿಯೋಗಿಸಿದ್ದಾರೆ. ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಹೊಸನಗರ ಶಾಖೆಯಲ್ಲಿನ ಎಸ್.ಬಿ. ಖಾತೆಯಲ್ಲಿದ್ದ ಹಣ ರೂ.5,952/-ಗಳನ್ನು ಸಹ ಜವಾಬ್ದಾರಿ ತೀರುವಳಿಗಾಗಿ ವಿನಿಯೋಗಿಸಲಾಗಿದೆ. ಸದಸ್ಯರ ಪಾಲು ಬಂಡವಾಳ ರೂ.22,200/-ಗಳು ಇದ್ದು, ಈ ಮೊಬಲಗಿನಲ್ಲಿ ರೂ.11,130/-ಗಳನ್ನು ನಗದಾಗಿ ಸದಸ್ಯರಿಗೆ ಹಿಂದಿರುಗಿಸಲು ಉಳಿದ ಮೊಬಲಗನ್ನು ನಷ್ಟಕ್ಕೆ ವರ್ಗಾಯಿಸಲು ತೀರ್ಮಾನಿಸಿದ್ದಾರೆ. ಅದರಂತೆ ಸದಸ್ಯರ ಷೇರು ಮೊಬಲಗನ್ನು ಪ್ರತಿ ರೂ.100/-ರ ಷೇರಿಗೆ ರೂ.65/- ರಂತೆ ಅಂದರೆ ಶೇಕಡ 65ರ ದರದಲ್ಲಿ ಷೇರುಧನ ವಾಪಾಸ್ಸು ನೀಡಿರುವುದಾಗಿ ದಿ:9.12.2004 ರಂದು ಸಮಾಪನಾಧಿಕಾರಿಯು ಠರಾವು ಪಾಸು ಮಾಡಿದ್ದು ಉಳಿದ ಆಸ್ತಿ-ಜವಾಬ್ದಾರಿಗಳ ತೀರುವಳಿಗೆ ರಹವಿಲ್ಲದ ಕಾರಣ ಹೊಂದಾಣಿಕೆ ಮುಖಾಂತರ ಅಡಾವೆ ಪತ್ರಿಕೆಯನ್ನು ಶೂನ್ಯಗೊಳಿಸಲು ತೀರ್ಮಾನಿಸಿದ್ದಾರೆ. ಇವರ ನಿಲುವನ್ನು ಪುಷ್ಠೀಕರಿಸಿರುವ ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರು ಸಂಘದ ಆಸ್ತಿ-ಜವಾಬ್ದಾರಿಗಳು ಶೂನ್ಯಗೊಂಡಿದ್ದು, ಸರ್ಕಾರದ ವಿನಿಯೋಗಗಳೇನು ಇಲ್ಲದ ಪ್ರಯುಕ್ತ ಸಂಘದ ನೋಂದಣಿ ಸಂಖ್ಯೆ ರದ್ದುಪಡಿಸುವಂತೆ ಶಿಫಾರಸ್ಸು ಮಾಡಿದ್ದಾರೆ.

ಈ ಎಲ್ಲಾ ಅಂಶಗಳ ಹಿನ್ನೆಲೆಯಲ್ಲಿ ಸಂಘದ ಅಡಾವೆ ಪತ್ರಿಕೆ ಶೂನ್ಯವಾಗಿರುವ ಪ್ರಯುಕ್ತ ಹಾಗೂ ಸರ್ಕಾರದ ವಿನಿಯೋಗಗಳು, ಸ್ಥಿರಾಸ್ತಿಗಳು ಯಾವುದೂ ಇಲ್ಲದ ಪ್ರಯುಕ್ತ ಸಂಘವನ್ನು ಸಮಾಪನಾವಸ್ಥೆಯಲ್ಲಿಯೇ ಮುಂದುವರೆಸುವುದರಿಂದ ಸಂಘದ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಯಾವುದೇ ಪ್ರಯೋಜನವಿಲ್ಲದಿರುವುದನ್ನು ಮನಗಂಡು ಸಹಕಾರ ಸಂಘಗಳ ಉಪನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರ ಶಿಫಾರಸ್ಸಿನನ್ವಯ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವುದೇ ಸೂಕ್ತವೆಂದು ಪರಿಗಣಿಸಲಾಗಿದ್ದು, ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಜೆಆರ್‌ಬಿ:ಎಲ್‌ಕ್ಯೂಡಿ:14:ಎಲ್‌ಎಂಸಿ:2003-04, ದಿನಾಂಕ: 31ನೇ ಮಾರ್ಚ್ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂ.ಸಿಎಂಡಬ್ಲ್ಯೂ:69:ಸಿಎಲ್‌ಎಂ:2001, ದಿ:21.11.01 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು, ಆದ ನಾನು ಹೊಸನಗರ ತಾಲ್ಲೂಕು ಕುಣಬಿ ಜನಾಂಗದ ವಿವಿದೋದ್ದೇಶ ಸಹಕಾರ ಸಂಘ ನಿಯಮಿತ, ಹೊಸನಗರ, ಶಿವಮೊಗ್ಗ ತಾಲ್ಲೂಕು ಈ ಸಹಕಾರ ಸಂಘದ ನೋಂದಣಿ ಸಂಖ್ಯೆ:20165/98-99 ದಿ:16.9.1998ನ್ನು ಈ ಕೂಡಲೇಯಿಂದ ಜಾರಿಗೆ ಬರುವಂತೆ ರದ್ದುಪಡಿಸಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ದಿನಾಂಕದಿಂದ ಸಂಘವು ಸಂಪೂರ್ಣವಾಗಿ ತನ್ನ ಅಸ್ತಿತ್ವವನ್ನು ಕಳೆದುಕೊಂಡು ವಿಸರ್ಜಿತವಾಗಿದೆ ಎಂದು ಪರಿಗಣಿಸತಕ್ಕದ್ದು, ಈ ಸಂಘಗಳ ಸಂಬಂಧಿಸಿದ ದಾಖಲಾತಿಗಳನ್ನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳನ್ನು 1960ರ ನಿಯಮ 33 ರನ್ವಯ 03 ವರ್ಷಗಳ ಕಾಲ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಉಪವಿಭಾಗ, ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ: 31ನೇ ಡಿಸೆಂಬರ್ 2005 ರಂದು ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್. 612 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ**

**ವಿಷಯ:** 2005-06 ರಿಂದ 2009-2010ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿಯ ಚುನಾವಣೆ ನಡೆದು ಕೋರಂ ಇಲ್ಲದ ಕಾರಣ ಕಲಂ 31(1) ರನ್ವಯ ಕ್ರಮವಿಡುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಆದೇಶದ ಸಂಖ್ಯೆ:ಸನಿ47/ ಚುನಾವಣೆ/40/2004-05 ದಿ: 27.1.2005.

2. ಚುನಾವಣಾಧಿಕಾರಿಗಳ ಪತ್ರದ ದಿನಾಂಕ 31.3.2005.

3. ಸರ್ಕಾರದ ಆದೇಶದ ಸಂಖ್ಯೆ:ಸಿಎಂಡಬ್ಲ್ಯು/37/ಸಿಎಲ್‌ಎಂ/2004 ದಿ:4.2.2005.
4. ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯು/69/ಸಿಎಲ್‌ಎಂ/2001 ದಿ:21.11.2001.

**ಪ್ರಸ್ತಾವನೆ:**

ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಶ್ರೀ ವಾಣಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ (ನಿ), ನೆಲಮಂಗಲ ತಾಲ್ಲೂಕು ಈ ಸಂಘದ 2005-2006 ರಿಂದ 2009-2010ನೇ ಸಾಲುಗಳ ಆಡಳಿತ ಮಂಡಳಿ ಸದಸ್ಯರ ಚುನಾವಣೆಯನ್ನು ದಿನಾಂಕ:31.3.2005 ರೊಳಗೆ ನಡೆಸಲು ಚುನಾವಣಾಧಿಕಾರಿಯನ್ನು ನೇಮಕ ಮಾಡಲಾಗಿದ್ದು, ಉಲ್ಲೇಖ (2)ರಲ್ಲಿ ಚುನಾವಣಾಧಿಕಾರಿಗಳು, ಸಂಘದ ಆಡಳಿತ ಮಂಡಳಿಯ ಚುನಾವಣೆಗೆ ಸಂಬಂಧಿಸಿದಂತೆ ಸಂಘದ ಉಪನಿಯಮದಂತೆ 9 ಅಭ್ಯರ್ಥಿಗಳು ಆಯ್ಕೆಯಾಗಬೇಕಾಗಿರುತ್ತದೆ. ಚುನಾವಣಾ ಪ್ರಕ್ರಿಯೆಯಲ್ಲಿ ಅಂತಿಮವಾಗಿ ಕೇವಲ ಮೂರು ಅಭ್ಯರ್ಥಿಗಳು ಅವಿರೋಧವಾಗಿ ಆಯ್ಕೆಯಾಗಿದ್ದು ಉಳಿದ 06 ಸ್ಥಾನಗಳು ಖಾಲಿ ಇರುವುದರಿಂದ ಸಂಘದ ಆಡಳಿತ ಮಂಡಳಿಯಲ್ಲಿ ಕೋರಂ ಇಲ್ಲದೆ ಅಪೂರ್ಣ ಆಡಳಿತ ಮಂಡಳಿ ರಚನೆಯಾಗಿರುವುದರಿಂದ ಕಾನೂನಿನ ಪ್ರಕಾರ ಸೂಕ್ತ ಕ್ರಮ ಕೈಗೊಂಡು ಕೋರಿರುತ್ತಾರೆ. ಆದ್ದರಿಂದ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 29ಎ(2)ರನ್ವಯ ಚುನಾವಣಾ ಬಹುಮುಖವಿರುವ ಆಡಳಿತ ಮಂಡಳಿಯು ರಚನೆಯಾಗಿದೆ ಶೂನ್ಯಾವಸ್ಥೆ ಉಂಟಾಗಿರುವುದರಿಂದ ಸದರಿ ಸಂಘದ ಆಡಳಿತ ಮಂಡಳಿ ಸ್ಥಾನದಲ್ಲಿ ಸಂಘದಲ್ಲಿ ಕಲಂ 31(1)ರನ್ವಯ ವಿಶೇಷಾಧಿಕಾರಿಯನ್ನು ನೇಮಕ ಮಾಡುವ ಅವಶ್ಯಕತೆ ಉಂಟಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮಾಂಕ:ಸನಿ47/ಅಮರ/12/2005-06, ದಿನಾಂಕ: 1ನೇ ಏಪ್ರಿಲ್ 2005**

ಪ್ರಸ್ತಾವೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಎಂ. ಚನ್ನಭೈರಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 31(1) ರ ಪ್ರಕಾರ ಹಾಗೂ ಉಲ್ಲೇಖ (4)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ವಾಣಿ ಮಹಿಳಾ ವಿವಿದೋದ್ದೇಶ ಸಹಕಾರ ಸಂಘ (ನಿ), ನೆಲಮಂಗಲ ತಾಲ್ಲೂಕು ಇದರ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಈ ಸಂಘಕ್ಕೆ ಶ್ರೀಮತಿ ಎಂ.ಜಿ. ಗೀತಾರಾಣಿ ಪ್ರಥಮ ದರ್ಜೆ ಸಹಾಯಕರು ಸಹಕಾರ ಸಂಘಗಳ ಉಪನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಇವರನ್ನು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಗೆ ವಿಶೇಷಾಧಿಕಾರಿಯಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ವಿಶೇಷಾಧಿಕಾರಿಗಳು ಈ 6 ತಿಂಗಳ ಅವಧಿಯೊಳಗಾಗಿ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ವಿಶೇಷಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯಿದೆ ನಿಯಮ ಮತ್ತು ಸಂಘದ ಉಪನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ವಿಶೇಷಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟ ಕೆಲಸ ನಿರ್ವಹಿಸುವುದು. ವಿಶೇಷಾಧಿಕಾರಿಗಳ ಅಧಿಕಾರ ಅವಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:1.4.2005 ರಂದು ಹೊರಡಿಸಿರುತ್ತೇನೆ.

**ಎಂ. ಚನ್ನಭೈರಯ್ಯ**

ಪಿ.ಆರ್. 613 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ರವರ ಕಾರ್ಯಾಲಯ**

**ವಿಷಯ:** ನಿಷ್ಕ್ರಿಯಗೊಂಡಿರುವ ಸಾಗರ ತಾಲ್ಲೂಕು ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ (ನಿ), ಸಾಗರ ಇದರ ಸಮಾಪನೆ ಬಗ್ಗೆ.

**ಉಲ್ಲೇಖ:**
1. ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಇವರ ಪ್ರಸ್ತಾವೆ ಸಂಖ್ಯೆ: ಜಿಆರ್‌ಬಿ:ಎಲ್‌ಕ್ಯೂಡಿ:13: ಎಲ್‌ಎಂಸಿ:03-04.
2. ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮಸಂಖ್ಯೆ ದಿನಾಂಕ: 8.10.2004.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಪತ್ರ ಸಂಖ್ಯೆ:ಎಆರ್-25:ಸಮಾಪನೆ:ಕಾಕೇನೋ:136: 04-05, ದಿನಾಂಕ: 9.11.2004.
4. ಈ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ:9.12.04.
5. ಜಿಲ್ಲಾ ಖಾದಿ ಗ್ರಾಮೋದ್ಯೋಗ ಅಧಿಕಾರಿ, ಶಿವಮೊಗ್ಗ ಇವರ ಪತ್ರ ಸಂಖ್ಯೆ:ಬಿಕೆಕೆ:ಕಾನೂನು:ಸಾ.ವ:897:03-04, ದಿನಾಂಕ:14.02.2005.

**ಪ್ರಸ್ತಾವನೆ:**

ಸಾಗರ ತಾಲ್ಲೂಕು ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ (ನಿ), ಸಾಗರ ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಡಿಆರ್‌ಎನ್:1381:76-77, ದಿನಾಂಕ: 31.3.1977 ರನ್ವಯ ನೋಂದಣಿಯಾಗಿದ್ದು, ತನ್ನ ನೊಂದಣಿ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದಿರುವ ಬಗ್ಗೆ ಉಲ್ಲೇಖ (1) ರಲ್ಲಿ ಸ್ವೀಕೃತವಾದ ವರದಿಯನ್ನಾಧರಿಸಿ, ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಸಂಘವನ್ನೇಕೆ ಸಮಾಪನೆಗೊಳಿಸಿ, ಸಮಾಪನಾಧಿಕಾರಿಯನ್ನು ನೇಮಿಸಬಾರದೆಂಬುದಕ್ಕೆ ಕಾರಣ ಕೇಳಿ ನೋಟೀಸನ್ನು ಜಾರಿಗೊಳಿಸಿದ್ದು, ಸಮಜಾಯಿಷಿ ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡಲಾಗಿದೆ. ಸದರಿ ನೋಟೀಸುಗಳ ಸಂಬಂಧಿಸಿದವರಿಗೆ ಜಾರಿಗೊಳಿಸಿರುವ ಬಗ್ಗೆ ಉಲ್ಲೇಖ (3)ರಲ್ಲಿ ಸ್ವೀಕೃತಿ ಪತ್ರವನ್ನು ಪಡೆಯಲಾಗಿದ್ದು, ಸಂಘದ ಯಾವುದೇ ಆಡಳಿತ ಮಂಡಳಿ ಸದಸ್ಯರು ಸದರಿ ನೋಟೀಸಿಗೆ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ.

ಸಂಘಕ್ಕೆ ಖಾದಿ ಗ್ರಾಮೋದ್ಯೋಗ ಮಂಡಳಿಯ ವತಿಯಿಂದ ಕೈಗಾರಿಕಾ ಸಾಲ ನೀಡಲಾಗಿರುವ ಹಿನ್ನೆಲೆಯಲ್ಲಿ ಸಂಘವನ್ನು ಸಮಾಪನೆಗೊಳಿಸುವ ಉಲ್ಲೇಖ (4)ರಲ್ಲಿ ಪತ್ರ ಬರೆಯಲಾಗಿದ್ದು, ಉಲ್ಲೇಖ (5)ರಲ್ಲಿ ಶಿವಮೊಗ್ಗ ಜಿಲ್ಲಾ ಖಾದಿ ಗ್ರಾಮೋದ್ಯೋಗ ಅಧಿಕಾರಿಯವರು

ಸಂಘದ ವ್ಯವಹಾರಗಳ ಬಗ್ಗೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸುತ್ತಾ, ಸಂಘವನ್ನು ಸಮಾಪನೆಗೊಳಿಸಿ, ಸಮಾಪನಾಧಿಕಾರಿ ನೇಮಕ ಮಾಡಲು ತಮ್ಮ ಆಕ್ಷೇಪಣೆಗಳು ಇಲ್ಲವೆಂದು ಇರುವುದಿಲ್ಲವಾಗಿ ವರದಿಸಿದ್ದಾರೆ.

ಈ ಅಂಶಗಳ ಹಿನ್ನೆಲೆಯಲ್ಲಿ ಸಂಘದ ವ್ಯವಹಾರಗಳು ಸಂಪೂರ್ಣವಾಗಿ ಸ್ಥಗಿತಗೊಂಡಿದ್ದು, ಇದರ ಬಗ್ಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗಾಗಲೀ, ಸಾಮಾನ್ಯ ಸದಸ್ಯರಿಗಾಗಲೀ ಆಸಕ್ತಿ ಇಲ್ಲದಿರುವುದನ್ನು ಮನಗಂಡಿದ್ದು, ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ಕೋರಿಕೆಯಂತೆ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

**ಸಂಖ್ಯೆ:ಜೆಆರ್‌ಬಿ:ಎಲ್‌ಕ್ಯೂಡಿ:13:ಎಲ್‌ಎಂಸಿ:2003-04, ದಿನಾಂಕ: 23ನೇ ಫೆಬ್ರವರಿ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ಹಾಗೂ 73ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:01 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಸಾಗರ ತಾಲ್ಲೂಕು ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ (ನಿ), ಸಾಗರ ಈ ಸಹಕಾರ ಸಂಘವನ್ನು ಸಮಾಪನೆಯಲ್ಲಿರಿಸಿ, ಮೇಲ್ವಿಚಾರಕರು (ಸಾಗರ ತಾಲ್ಲೂಕು) ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ತಿಲಕ್ ನಗರ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯವರು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ಕಲಂ 74 ರನ್ವಯ ಸಮಾಪನಾಧಿಕಾರಿಯ ಕರ್ತವ್ಯಗಳನ್ನು ನಿರ್ವಹಿಸಿ ಸಂಘದ ಆಸ್ತಿ-ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೆಗೊಳಿಸಿ ಈ ಆದೇಶದ ದಿನಾಂಕದಿಂದ 90 (ತೊಂಬತ್ತು) ದಿನಗಳ ಒಳಗಾಗಿ ಸಂಘದ ನೋಂದಣಿ ರದ್ದತಿಗಾಗಿ ಯುಕ್ತದ್ವಾರದ ಮುಖಾಂತರ ಪ್ರಸ್ತಾವೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:23ನೇ ಫೆಬ್ರವರಿ 2005 ರಂದು ಸ್ವಸಹಿ ಹಾಗೂ ಕಛೇರಿ ಮುದ್ರಾಂಕದೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್. 614 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ರವರ ಕಾರ್ಯಾಲಯ**

**ವಿಷಯ:** ನಿಷ್ಕ್ರಿಯಗೊಂಡಿರುವ ಸಾಗರ ತಾಲ್ಲೂಕು ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ (ನಿ), ಸಾಗರ ಇದರ ಸಮಾಪನೆ ಬಗ್ಗೆ.

**ಉಲ್ಲೇಖ:**

1. ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ಇವರ ಪ್ರಸ್ತಾವೆ ಸಂಖ್ಯೆ: ಜೆಆರ್‌ಬಿ:ಎಲ್‌ಕ್ಯೂಡಿ:13: ಎಲ್‌ಎಂಸಿ:03-04.
2. ಈ ಕಛೇರಿಯ ಕಾರಣ ಕೇಳಿ ನೋಟೀಸು ಸಮಸಂಖ್ಯೆ ದಿನಾಂಕ: 8.10.2004.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಸಾಗರ ಇವರ ಪತ್ರ ಸಂಖ್ಯೆ:ಎಆರ್-25:ಸಮಾಪನೆ:ಕಾಕೇನೋ:136: 04-05, ದಿನಾಂಕ: 9.11.2004.
4. ಈ ಕಛೇರಿ ಪತ್ರ ಸಮಸಂಖ್ಯೆ ದಿನಾಂಕ:9.12.04.
5. ಜಿಲ್ಲಾ ಖಾದಿ ಗ್ರಾಮೋದ್ಯೋಗ ಅಧಿಕಾರಿ, ಶಿವಮೊಗ್ಗ ಇವರ ಪತ್ರ ಸಂಖ್ಯೆ:ಬಿಕೆಕೆ:ಕಾನೂನು:ಸಾ.ವ:897:03-04, ದಿನಾಂಕ:14.02.2005.

**ಪ್ರಸ್ತಾವನೆ:**

ಸಾಗರ ತಾಲ್ಲೂಕು ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ (ನಿ), ಸಾಗರ ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಡಿಆರ್‌ಎಸ್:1381:76-77, ದಿನಾಂಕ: 31.3.1977 ರನ್ವಯ ನೋಂದಣಿಯಾಗಿದ್ದು, ತನ್ನ ನೋಂದಣಿ ಉದ್ದೇಶಗಳಿಗನುಗುಣವಾಗಿ ಕಾರ್ಯನಿರ್ವಹಿಸದಿರುವ ಬಗ್ಗೆ ಉಲ್ಲೇಖ (1) ರಲ್ಲಿ ಸ್ವೀಕೃತವಾದ ವರದಿಯನ್ನಾಧರಿಸಿ, ಸಂಘದ ಆಡಳಿತ ಮಂಡಳಿ ಸದಸ್ಯರಿಗೆ ಸಂಘವನ್ನೇಕೆ ಸಮಾಪನೆಗೊಳಿಸಿ, ಸಮಾಪನಾಧಿಕಾರಿಯನ್ನು ನೇಮಿಸಬಾರದೆಂಬುದಕ್ಕೆ ಕಾರಣ ಕೇಳಿ ನೋಟೀಸನ್ನು ಜಾರಿಗೊಳಿಸಿದ್ದು, ಸಮಜಾಯಿಷಿ ಸಲ್ಲಿಸಲು 15 ದಿನಗಳ ಕಾಲಾವಕಾಶ ನೀಡಲಾಗಿದೆ. ಸದರಿ ನೋಟೀಸುಗಳ ಸಂಬಂಧಿಸಿದವರಿಗೆ ಜಾರಿಗೊಳಿಸಿರುವ ಬಗ್ಗೆ ಉಲ್ಲೇಖ (3)ರಲ್ಲಿ ಸ್ವೀಕೃತಿ ಪತ್ರವನ್ನು ಪಡೆಯಲಾಗಿದ್ದು, ಸಂಘದ ಯಾವುದೇ ಆಡಳಿತ ಮಂಡಳಿ ಸದಸ್ಯರು ಸದರಿ ನೋಟೀಸಿಗೆ ಯಾವುದೇ ಪ್ರತಿಕ್ರಿಯೆ ನೀಡಿರುವುದಿಲ್ಲ.

ಸಂಘಕ್ಕೆ ಖಾದಿ ಗ್ರಾಮೋದ್ಯೋಗ ಮಂಡಳಿಯ ವತಿಯಿಂದ ಕೈಗಾರಿಕಾ ಸಾಲ ನೀಡಲಾಗಿರುವ ಹಿನ್ನೆಲೆಯಲ್ಲಿ ಸಂಘವನ್ನು ಸಮಾಪನೆಗೊಳಿಸುವ ಉಲ್ಲೇಖ (4)ರಲ್ಲಿ ಪತ್ರ ಬರೆಯಲಾಗಿದ್ದು, ಉಲ್ಲೇಖ (5)ರಲ್ಲಿ ಶಿವಮೊಗ್ಗ ಜಿಲ್ಲಾ ಖಾದಿ ಗ್ರಾಮೋದ್ಯೋಗ ಅಧಿಕಾರಿಯವರು ಸಂಘದ ವ್ಯವಹಾರಗಳ ಬಗ್ಗೆ ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸುತ್ತಾ, ಸಂಘವನ್ನು ಸಮಾಪನೆಗೊಳಿಸಿ, ಸಮಾಪನಾಧಿಕಾರಿ ನೇಮಕ ಮಾಡಲು ತಮ್ಮ ಆಕ್ಷೇಪಣೆಗಳು ಇಲ್ಲವೆಂದು ಇರುವುದಿಲ್ಲವಾಗಿ ವರದಿಸಿದ್ದಾರೆ.

ಈ ಅಂಶಗಳ ಹಿನ್ನೆಲೆಯಲ್ಲಿ ಸಂಘದ ವ್ಯವಹಾರಗಳು ಸಂಪೂರ್ಣವಾಗಿ ಸ್ಥಗಿತಗೊಂಡಿದ್ದು, ಇದರ ಬಗ್ಗೆ ಸಂಘದ ಆಡಳಿತ ಮಂಡಳಿ ಸದಸ್ಯರಿಗಾಗಲೀ, ಸಾಮಾನ್ಯ ಸದಸ್ಯರಿಗಾಗಲೀ ಆಸಕ್ತಿ ಇಲ್ಲದಿರುವುದನ್ನು ಮನಗಂಡಿದ್ದು, ಸಹಕಾರ ಸಂಘಗಳ ಉಪ ನಿಬಂಧಕರು, ಶಿವಮೊಗ್ಗ ರವರ ಕೋರಿಕೆಯಂತೆ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ, ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ**

**ಸಂಖ್ಯೆ:ಜೆಆರ್‌ಬಿ:ಎಲ್‌ಕ್ಯೂಡಿ:13:ಎಲ್‌ಎಂಸಿ:2003-04, ದಿನಾಂಕ: 23ನೇ ಫೆಬ್ರವರಿ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ಹಾಗೂ 73ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69:ಸಿಎಲ್ಎಂ:01 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಸಾಗರ ತಾಲ್ಲೂಕು ಕಸಬುದಾರರ ಕೈಗಾರಿಕಾ ವಿವಿದೋದ್ದೇಶ ಸಹಕಾರ ಸಂಘ (ನಿ), ಸಾಗರ ಈ ಸಹಕಾರ ಸಂಘವನ್ನು ಸಮಾಪನೆಯಲ್ಲಿರಿಸಿ, ಮೇಲ್ವಿಚಾರಕರು (ಸಾಗರ ತಾಲ್ಲೂಕು) ಕರ್ನಾಟಕ ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ, ತಿಲಕ್ ನಗರ, ಶಿವಮೊಗ್ಗ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಿರುತ್ತೇನೆ.

ನೇಮಕಗೊಂಡ ಸಮಾಪನಾಧಿಕಾರಿಯವರು ಕೂಡಲೇ ಸಂಘದ ಪ್ರಭಾರವನ್ನು ವಹಿಸಿಕೊಂಡು ಕಲಂ 74 ರನ್ವಯ ಸಮಾಪನಾಧಿಕಾರಿಯ ಕರ್ತವ್ಯಗಳನ್ನು ನಿರ್ವಹಿಸಿ ಸಂಘದ ಆಸ್ತಿ-ಜವಾಬ್ದಾರಿಗಳನ್ನು ನಿಯಮಾನುಸಾರ ವಿಲೇಗೊಳಿಸಿ ಈ ಆದೇಶದ ದಿನಾಂಕದಿಂದ 90 (ತೊಂಬತ್ತು) ದಿನಗಳ ಒಳಗಾಗಿ ಸಂಘದ ನೋಂದಣಿ ರದ್ದತಿಗಾಗಿ ಯುಕ್ತದ್ದಾರದ ಮುಖಾಂತರ ಪ್ರಸ್ತಾವೆ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ:23ನೇ ಫೆಬ್ರವರಿ 2005 ರಂದು ಸ್ವಸಹಿ ಹಾಗೂ ಕಛೇರಿ ಮುದ್ರಾಂಕದೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್. 615 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ರವರ ನಡವಳಿಕೆಗಳು**

**ವಿಷಯ:** ಸ್ಥಗಿತಗೊಂಡಿರುವ ಹೊನ್ನಾಳಿ ತಾಲ್ಲೂಕು ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘ (ನಿ), ಹೊನ್ನಾಳಿ ಇದರ ಸಮಾಪನೆ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಇವರ ಪ್ರಸ್ತಾವೆ ಸಂಖ್ಯೆ: ಡಿಆರ್:ಡಿವಿಜಿ:ಸಮಾಪನೆ:54:2000-01, ದಿನಾಂಕ: 28.01.2005.

**ಪ್ರಸ್ತಾವನೆ:**

ಹೊನ್ನಾಳಿ ತಾಲ್ಲೂಕು ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ (ನಿ), ಹೊನ್ನಾಳಿ, ದಾವಣಗೆರೆ ಜಿಲ್ಲೆ ಈ ಸಹಕಾರ ಸಂಘವು ನೋಂದಣಿ ಸಂಖ್ಯೆ: ಡಿಆರ್ಎಸ್:20455:95-96, ದಿನಾಂಕ:23.01.1996ರಲ್ಲಿ ನೋಂದಣಿಯಾಗಿರುತ್ತದೆ. ಈ ಸಂಘದ ಕಾರ್ಯವ್ಯಾಪ್ತಿಯು ಹೊನ್ನಾಳಿ ತಾಲ್ಲೂಕಿಗೆ ಸೀಮಿತ ವಾಗಿರುತ್ತದೆ. ಈ ಸಹಕಾರ ಸಂಘವು ಪ್ರಾರಂಭದಿಂದಲೂ ನೋಂದಾವಣೆಯಾದ ಉದ್ದೇಶಗಳಿಗೆ ಪೂರಕವಾಗಿ ಕಾರ್ಯನಿರ್ವಹಿಸದೇ ಸಂಪೂರ್ಣವಾಗಿ ಸ್ಥಗಿತಗೊಂಡಿರುತ್ತದೆ.

ಈ ಸಹಕಾರ ಸಂಘದ ಆಡಳಿತ ಮಂಡಳಿ ಸದಸ್ಯರ ಅಥವಾ ಇತರೆ ಸಾಮಾನ್ಯ ಸದಸ್ಯರ ಬಗ್ಗೆ ಯಾವುದೇ ಮಾಹಿತಿ ದೊರೆಯದ ಕಾರಣ ಸಂಬಂಧಿಸಿದ ಕ್ಷೇತ್ರಾಧಿಕಾರಿಗಳಿಂದ ವರದಿ ಪಡೆದು, ನಂತರ ಸಂಘದ ಅಸ್ತಿತ್ವವನ್ನು ಪ್ರಶ್ನಿಸುವ ನಿಟ್ಟಿನಲ್ಲಿ, ದಿನಾಂಕ:1.12.204 ರಂದು 'ನಗರವಾಣಿ' ಎಂಬ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಣೆಯನ್ನು ಪ್ರಚುರಪಡಿಸಿದ್ದು, ಪ್ರಕಟಣೆಯ ದಿನಾಂಕದಿಂದ 15 ದಿನಗಳ ಒಳಗಾಗಿ ಆಕ್ಷೇಪಣೆಗಳನ್ನು ಸಲ್ಲಿಸಲು ಕಾಲಾವಕಾಶ ನೀಡಿರುತ್ತಾರೆ. ಈ ಪ್ರಕಟಣೆಗೆ ಯಾವುದೇ ಆಕ್ಷೇಪಣೆಗಳು ಬಾರದ ಕಾರಣ, ಸಂಘವನ್ನು ಸಮಾಪನೆಗೊಳಿಸಿ ನೊಂದಣಿ ರದ್ದುಪಡಿಸಬೇಕೆಂದು ಉಲ್ಲೇಖದಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಇವರು ಪ್ರಸ್ತಾವೆ ಸಲ್ಲಿಸಿದ್ದಾರೆ.

ಪ್ರಸ್ತಾವೆಯನ್ನು ಪರಿಶೀಲಿಸಲಾಗಿ, ಸಂಘವು ನೊಂದಣೆಯಾದಾಗಿನಿಂದ ಉಪನಿಯಮಗಳಿಗನುಗುಣವಾಗಿ ಯಾವುದೇ ಕಾರ್ಯಚಟುವಟಿಕೆಗಳನ್ನು ನಡೆಸದೇ ಸಂಪೂರ್ಣವಾಗಿ ಸ್ಥಗಿತಗೊಂಡಿರುವುದಾಗಿ ವರದಿಯಾಗಿದ್ದು, ಸಂಘದ ಲೆಕ್ಕಪತ್ರಗಳು ಸಹ ಪರಿಶೋಧನೆಯಾಗಿರುವುದಿಲ್ಲ. ಈ ಸಂಘದ ಅಸ್ತಿತ್ವದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಲಾಗಿದ್ದರೂ ಸಂಘದ ಆಡಳಿತ ಮಂಡಳಿ ಸದಸ್ಯರಾಗಲೀ ಅಥವಾ ಸಾಮಾನ್ಯ ಸದಸ್ಯರಾಗಲೀ ಪ್ರತಿಕ್ರಿಯಿಸದಿರುವುದು ಸಂಘದ ಬಗ್ಗೆ ಇವರಿಗೆ ಯಾವುದೇ ಆಸಕ್ತಿ ಇಲ್ಲವೆಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಅಂಶಗಳ ಹಿನ್ನೆಲೆಯಲ್ಲಿ ಹಾಗೂ ಸಹಕಾರ ಸಂಘಗಳ ಉಪ ನಿಬಂಧಕರ ಶಿಫಾರಸ್ಸಿನನ್ವಯ ಸಂಘವನ್ನು ಸಮಾಪನೆಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಕೆಳಕಂಡಂತೆ ಆದೇಶಿಸಿದೆ.

**ಆದೇಶ**

**ಸಂಖ್ಯೆ:ಜೆಆರ್‌ಬಿ:ಎಲ್‌ಕ್ಯೂಡಿ:40:ಎಲ್‌ಎಂಸಿ:2004-05, ದಿನಾಂಕ: 28ನೇ ಫೆಬ್ರವರಿ 2005**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)(ಬಿ) ಅನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ:69: ಸಿಎಲ್ಎಂ:2001 ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ, ಬಸವೇಗೌಡ, ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು ಆದ ನಾನು ಹೊನ್ನಾಳಿ ತಾಲ್ಲೂಕು, ಹೊನ್ನಾಳಿ ತಾಲ್ಲೂಕು ಕುರಿ ಮತ್ತು ಉಣ್ಣೆ ಉತ್ಪಾದಕರ ಸಹಕಾರ ಸಂಘವನ್ನು ಈ ಕೂಡಲೇ ಜಾರಿಗೆ ಬರುವಂತೆ ಸಮಾಪನೆಯಲ್ಲಿರಿಸಿ ಆದೇಶಿಸಿರುತ್ತೇನೆ.

ಈ ಆದೇಶವನ್ನು ಈ ದಿನ ದಿನಾಂಕ:28ನೇ ಫೆಬ್ರವರಿ 2005 ರಂದು ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಬಸವೇಗೌಡ**

ಪಿ.ಆರ್. 616 ಸಹಕಾರ ಸಂಘಗಳ ಸಂಯುಕ್ತ ನಿಬಂಧಕರು, ಬೆಂಗಳೂರು ಪ್ರಾಂತ, ಬೆಂಗಳೂರು.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಮಂಡ್ಯ ಉಪವಿಭಾಗ-2, ಮಂಡ್ಯ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:50/2005**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1. ಶಿವಮ್ಮ ಕೋಂ ಲೇ|| ಚಿಕ್ಕಜವರೇಗೌಡ | | 1. ಎಂ. ಸುನೀಲ್ ಲೇಟ್. ಮಹದೇವಪ್ಪ 9 ಬಸವೇಶ್ವರನಗರ, ಹೆಬ್ಬಾಳ ಮೈನ್ ರಸ್ತೆ, ಮೈಸೂರು. |
| 2. ಮಾನಸ ಬಿನ್ ಲೇ|| ಚಿಕ್ಕಜವರೇಗೌಡ | | |
| 3. ಮಾದಯ್ಯ ಬಿನ್ ಲೇಟ್ ದೊಡ್ಡಜವರೇಗೌಡ | | |
| 4. ನಿಂಗಮ್ಮ ಕೊಂ|| ಮಾದಯ್ಯ 6ನೇ ಕ್ರಾಸ್, ಅರ್ಕೇಶ್ವರನಗರ, ಗುತ್ತಲುರಸ್ತೆ, ಮಂಡಳಿ. | | 2. ಶಾಖ ವ್ಯವಸ್ಥಾಪಕರು, ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ., ಎಂ.ಸಿ. ರಸ್ತೆ, ಮಂಡ್ಯ. |

**ಅಧಿಸೂಚನೆ**

ಅರ್ಜಿದಾರರಾದ ಶಿವಮ್ಮ ಅವರು ತಮ್ಮ ಗಂಡ ಮಗನಾದ ಶ್ರೀ ಚಿಕ್ಕಜವರೇಗೌಡ ಅವರು ಒಂದನೇ ಪ್ರತಿವಾದಿ ಶ್ರೀ:ಶ್ರೀಮತಿ ಎಂ. ಸುನೀಲ್ ರವರ ಬಳಿ ಚಾಲಕ ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ:26.2.05 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ

ಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೈಂ ಅರ್ಜಿ ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 7.4.05 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ-571 401.

ಪಿ.ಆರ್. 617

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಅಡಿ ಆಯುಕ್ತರು, ಗದಗ ಜಿಲ್ಲೆ ಗದಗ ಇವರ ನ್ಯಾಯಾಲಯದಲ್ಲಿ,**
**ಸಂಖ್ಯೆ: ಕಾಅಗ:ಕಾನಪ:F-29/2005/36, ದಿನಾಂಕ: 30ನೇ ಮಾರ್ಚ್, 6ನೇ ಏಪ್ರಿಲ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

ಶ್ರೀಮತಿ ಬಸವ್ವ ಕೊಂ. ರಾಮಪ್ಪಾ ಕೋಳಿವಾಡ (a) ತಳೂರ್
R/o ಬೆಂತೂರು ತಾ।। ಗದಗ ಜಿ।। ಗದಗ

1. ಶ್ರೀ ಮಂಜುನಾಥ, ಶಂಕ್ರಪ್ಪಾ ಬಂಕದ
R/o ಬೆಂತೂರು ತಾ।। ಗದಗ ಜಿ।। ಗದಗ.
2. ದಿ ಬ್ರ್ಯಾಂಚ್ ಮ್ಯಾನೇಜರ್,
ನ್ಯೂ ಇಂಡಿಯಾ ಅಶೂರೆನ್ಸ್, ಕಂ. ಲಿಮಿಟೆಡ್,
ತುಪ್ಪದ ಬಿಲ್ಡಿಂಗ್ ಹತ್ತಿರ ಗದಗ.
3. ಶ್ರೀ ಬಸವರಾಜ ಎಂ. ವಡ್ಡರ
ಶ್ರವಣ ಆಟೋ ಕನ್ಸಲ್ಟಂಟ್ ವಕಾರನಾಲ ಗದಗ

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಬಸವ್ವ ಕೋ.ರಾಮಪ್ಪಾ ಕೋಳಿವಾಡ (a) ತಳೂರ R/o ಬೆಂತೂರ ಇವರು, ತಾವು ಮೃತ ಹನುಮಂತಪ್ಪ ಇವರ ತಾಯಿ ಮತ್ತು - ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಹನುಮಂತಪ್ಪ ಇವರು ಒಂದನೇ ಪ್ರತಿವಾದಿಗಳಾದ ಮಂಜುನಾಥ ಬಂಕದ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂಧ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಪಿ.ಆರ್. 618 ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಅಡಿ ಆಯುಕ್ತರು, ಗದಗ ಜಿಲ್ಲೆ ಗದಗ ಇವರ ನ್ಯಾಯಾಲಯದಲ್ಲಿ,**
**ಸಂಖ್ಯೆ: ಕಾಅಗ:ಕಾನಪ:F-30/2005/39, ದಿನಾಂಕ: 1ನೇ, 6ನೇ ಏಪ್ರಿಲ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಚನ್ನವ್ವ ಕೋಂ ಈರಪ್ಪ ಜಾಲಪ್ಪನವರ ಕಲಕೇರಿ
ತಾ।।ಮುಂಡರಗಿ
2. ಶ್ರೀ ಈರಪ್ಪಾ ಸಿದ್ದಲಿಂಗಪ್ಪ ಜಾಲಪ್ಪನವರ ಕಲಕೇರಿ ತಾ।।
ಮುಂಡರಗಿ

1. ಶ್ರೀ ಗುರುಸಿದ್ದಪ್ಪ ಮಲ್ಲಪ್ಪ, ಮದೆಪೊಳದ
R/o ಕಲಕೇರಿ ತಾ।। ಮುಂಡರಗಿ
2. ದಿ ಡಿವಿಜನಲ್ ಮ್ಯಾನೇಜರ್ ದಿ ನ್ಯೂ ಇಂಡಿಯಾ
ಅಶೂರೆನ್ಸ್ ಕಂ. ಲಿ., ಕಿಟಲ್ ಕಾಲೇಜ್ ರಸ್ತೆ,
ಧಾರವಾಡ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ (1) ಚನ್ನವ್ವ ಕೋ. ಈರಪ್ಪ ಜಾಲಪ್ಪ ನವರ ಹಾಗೂ ಶ್ರೀ ಈರಪ್ಪ ಸಿ. ಜಾಲಪ್ಪನವರ ಇವರು, ತಾವು ಮೃತ ಮುದಕಪ್ಪ ಜಾಲಪ್ಪನವರ ಇವರ ತಾಯಿ ಮತ್ತು ತಂದೆ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಮುದಕಪ್ಪ ಜಾಲಪ್ಪನವರ ಇವರು ಒಂದನೇ ಪ್ರತಿವಾದಿಗಳಾದ ಗುರುಸಿದ್ದಪ್ಪ ಮಲ್ಲಪ್ಪ ಮದೆಪೊಳದ ಇವರಲ್ಲಿ ಕೂಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಪಿ.ಆರ್. 619 ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಅಡಿ ಆಯುಕ್ತರು, ಗದಗ ಜಿಲ್ಲೆ ಗದಗ ಇವರ ನ್ಯಾಯಾಲಯದಲ್ಲಿ,**
**ಸಂಖ್ಯೆ: ಕಾಅಗ:ಕಾನಪ:F-33/2005/47, ದಿನಾಂಕ: 2ನೇ, 6ನೇ ಏಪ್ರಿಲ್ 2005**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀ ಗುಡಿಸಾಲು ಹೊನ್ನೂರ ಸಾಬ S/o ಹೊನ್ನೂರಸಾಬ್
2. ಶ್ರೀಮತಿ ಹೊನ್ನೂರಬೀ W/o ಹೊನ್ನೂರಸಾಬ
R/o ಶ್ರೀರಂಗಪೂರಮ್ ತಾಲ್ಲೂಕ್: ಕಲ್ಯಾಣ ದುರ್ಗವರ್,
ಜಿಲ್ಲಾ: ಅನಂತಪುರ (AP)

1. ಜಿ. ಜಿಲಾನಿಬಾಷಾ S/o ಅಬ್ದುಲ್ ರಜಾಕ್‌ಸಾಬ
R/o ನಲಗಡ್ಡಾ ಜಿ।। ಬಳ್ಳಾರಿ.
2. ದಿ ಮ್ಯಾನೇಜರ್ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ.,
R/o ತಾಡಪತಿ ಜಿ।। ಅನಂತಪುರ (AP)
3. ದಿ ಡಿವಿಜನಲ್ ಮ್ಯಾನೇಜರ್,
ದಿ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ.,
ಎನ್‌ಕೆ ಕಾಂಪ್ಲೆಕ್ಸ್, ಹುಬ್ಬಳ್ಳಿ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ: ಗುಡಿಸಾಲು ಹೊನ್ನೂರಸಾಬ ಮತ್ತು ಶ್ರೀಮತಿ ಹೊನ್ನೂರಸಾಬ್ R/o ಶ್ರೀರಂಗಪೂರಮ್ ಇವರು, ತಾವು ಮೃತ ನಬಿ ರಸೂಲ ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ನಬಿ ರಸೋಲ ಇವರು ಒಂದನೇ ಪ್ರತಿವಾದಿಗಳಾದ ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ, ಗದಗ ಜಿಲ್ಲೆ, ಗದಗ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್. 620

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ: ಕಾನಪ:ಪ್ರ:F-13/2005, ದಿನಾಂಕ: 4ನೇ ಏಪ್ರಿಲ್ 2005**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಅರ್ಜುನ್ ಸಿಂಗ್, (2) ಚಂದ್ರಬಾತಿ ರಾತೋ ಗ್ರಾಮ ಬಿಸ್ವಾರ್ ಪೋಸ್ಟ್ | | 1. ಟಾಟಾ ಮೋಟಾರ್ಸ್ ಲಿ. ಸರ್ವೆ ನಂ.586/587 ಹತ್ತಿರ ಕ್ಯಾಟಲ್ ಫಾರಂ ಪೋಸ್ಟ್, ಹೊಸೂರು, ತಮಿಳುನಾಡು<br>2. ನ್ಯೂ ಇಂ. ಅಶೂ.ಕಂ.ಲಿ., ಚಿತ್ರದುರ್ಗ ಬ್ರ್ಯಾಂಚ್ ಚಿತ್ರದುರ್ಗ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ (1) ಅರ್ಜುನ್ ಸಿಂಗ್ (2) ಚಂದ್ರಬಾತಿ ಇವರು, ತಾವು ಮೃತ ಉಮೇಶ್‌ಕುಮಾರ್ ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಉಮೇಶ್‌ಕುಮಾರ್ ಇವರು ಒಂದನೇ ಪ್ರತಿವಾದಿಗಳಾದ ಟಾಟಾ ಮೋಟಾರ್ಸ್ ಲಿ., ಇವರಲ್ಲಿ "ಡ್ರೈವರ್" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 621

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**

**ಪ್ರಕರಣ ಸಂಖ್ಯೆ: ಕಾನಪ:ಪ್ರ:F-CR/17/2005, ದಿನಾಂಕ: 4ನೇ ಏಪ್ರಿಲ್ 2005**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1. ಸುಮಕ್ಕ, (2) ಕಾವ್ಯ, (3) ಕವಿತ, (4) ಸಿದ್ದೇಶ, (5) ಚಿತ್ರಕ್ಕ<br>**ಎಲ್ಲರೂ ವಾಸ:** ಜೋಡಿ ಚಿಕ್ಕೆನಹಳ್ಳಿ ಗೊಲ್ಲರ ಹಟ್ಟಿ. | | 1. ಸಣ್ಣಯ್ಯ ಟಾಟಾ ಮಾಲೀಕರು, ಕೆಎ. 16/ಟಿ. 1938/39 ಜೋಡಿ ಚಿಕ್ಕೇನಹಳ್ಳಿ<br>2. ನ್ಯೂ ಇಂ. ಅಶೂ. ಕಂ. ಲಿ. ದಾವಣಗೆರೆ. |

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಸುಮಕ್ಕ, (2) ಕಾವ್ಯ, (3) ಕವಿತ, (4) ಸಿದ್ದೇಶ, (5) ಚಿತ್ರಕ್ಕ ಇವರು, ತಾವು ಮೃತ ತಿಮ್ಮಣ್ಣ ಇವರ ಹೆಂಡತಿ, ಮಕ್ಕಳು ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ತಿಮ್ಮಣ್ಣ ಇವರು ಒಂದನೇ ಪ್ರತಿವಾದಿಗಳಾದ ಸಣ್ಣಯ್ಯ ಇವರಲ್ಲಿ "ಕೂಲಿ" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

ಪಿ.ಆರ್. 622

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**
**ಪ್ರಕರಣ ಸಂಖ್ಯೆ: ಕಾನಪ:ಪ್ರ:F-CR/16/2005, ದಿನಾಂಕ: 4ನೇ ಏಪ್ರಿಲ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಪುಷ್ಪಲತ, (2) ಲಕ್ಕಮ್ಮ
**ವಾಸ:** ಜಾನ್‌ಕಲ್ ಗ್ರಾಮ

1. ಬಿ.ಎಂ. ಸದಾಶಿವಪ್ಪ ವಾಹನ ಮಾಲೀಕರು, ಬನಸಿಹಳ್ಳಿ ಗ್ರಾಮ
2. ನ್ಯಾಷನಲ್ ಇನ್.ಕಂ.ಲಿ., ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಪುಷ್ಪಲತ, (2) ಲಕ್ಕಮ್ಮ ಇವರು, ತಾವು ಮೃತ ಎನ್.ಜಿ. ಕುಮಾರ್ ಇವರ ಹೆಂಡತಿ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಎನ್.ಜಿ. ಕುಮಾರ್ ಇವರು ಒಂದನೇ ಪ್ರತಿವಾದಿಗಳಾದ ಬಿ.ಎಂ. ಸದಾಶಿವಪ್ಪ ಇವರಲ್ಲಿ ಮೇಡರ್ ಅನ್ ಮೇಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಪಿ.ಆರ್. 623 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**
**ಪ್ರಕರಣ ಸಂಖ್ಯೆ: ಕಾನಪ:ಪ್ರ:F-CR/14/2005, ದಿನಾಂಕ: 4ನೇ ಏಪ್ರಿಲ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಪಾರ್ವತಮ್ಮ (2) ಹನುಮಕ್ಕ, (3) ಅನಿತ, (4) ಸುಮ, (5) ಸಾಕಮ್ಮ (6) ದೀಪಾ, (7) ಚಿನ್ನಿ, (8) ಚಿಂಟು

1. ಎನ್. ಬಸವರಾಜಪ್ಪ, ಟಾ.ಟಾ. ಮಾಲೀಕರು, ಕೆಎ-16/ಟಿ. 7879/3374 ಸೊಂಡೆಕೊಳ.
2. ನ್ಯಾಷನಲ್ ಇನ್.ಕಂ.ಲಿ. ದಾವಣಗೆರೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಪಾರ್ವತಮ್ಮ 7 ಜನ ಇವರು, ತಾವು ಮೃತ ಶಿವಣ್ಣ ಇವರ ತಾಯಿ, ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶಿವಣ್ಣ ಇವರು ಒಂದನೇ ಪ್ರತಿವಾದಿಗಳಾದ ಎನ್. ಬಸವರಾಜಪ್ಪ ಇವರಲ್ಲಿ ಮೇಡರ್ ಅನ್ ಮೇಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಪಿ.ಆರ್. 624 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**
**ಪ್ರಕರಣ ಸಂಖ್ಯೆ: ಕಾನಪ:ಪ್ರ:F-CR/15/2005, ದಿನಾಂಕ: 4ನೇ ಏಪ್ರಿಲ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ನಾಗಪ್ಪ, (2) ಗೌರಮ್ಮ
**ವಾಸ** ಚಿಪ್ಪನಕೆರೆ, ಮುದ್ದಾಪುರ ಪೋಸ್ಟ್.

1. ಕೆ.ಹೆಚ್. ರೇವಣ್ಣ, S/o ಹನುಮಕ್ಕ, ಟಾ.ಟಾ. ಮಾಲೀಕರು, ಕೆಎ-16/ಟಿ-4068-4069, ಚಿಪ್ಪಿನಕೆರೆ.
2. ನ್ಯಾಷನಲ್ ಇನ್ ಕಂ.ಲಿ., ಚಿತ್ರದುರ್ಗ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ (1) ನಾಗಪ್ಪ, (2) ಗೌರಮ್ಮ ಇವರು, ತಾವು ಮೃತ ಓಬಳೇಶ @ ಎನ್. ಓಬಳೇಶಿ ಇವರ ತಂದೆ ಮತ್ತು ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಓಬಳೇಶ ಇವರು ಒಂದನೇ ಪ್ರತಿವಾದಿಗಳಾದ ಕೆ.ಹೆಚ್. ರೇವಣ್ಣ ಇವರಲ್ಲಿ ಮೇಡರ್ ಅನ್ ಮೇಡರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಪಿ.ಆರ್. 625 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ**
**ಪ್ರಕರಣ ಸಂಖ್ಯೆ: ಕಾನಪ:ಪ್ರ:F-CR/18/2005, ದಿನಾಂಕ: 4ನೇ ಏಪ್ರಿಲ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಎಸ್. ಮಂಜುಳ, (2) ರಾಘವೇಂದ್ರ,
(3) ನಾಗಭೂಷಣ
**ವಾಸ:** ಹಿರಿಯೂರು

1. ಪಿ.ವಿ. ಶ್ಯಾಮಲಾದೇವಿ ಲಾರಿ ಮಾಲೀಕರು
ಕೆಎ-02/6627, ಹಿರಿಯೂರು.
2. ನ್ಯೂ ಇಂ. ಅಶೂ. ಕಂ.ಲಿ., ದಾವಣಗೆರೆ.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ (1) ಎಸ್. ಮಂಜುಳ, (2) ರಾಘವೇಂದ್ರ, (3) ನಾಗಭೂಷಣ ಇವರು, ತಾವು ಮೃತ ಬಿ. ಮಲ್ಲಿಕಾರ್ಜುನ ಚಾರಿ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಬಿ. ಮಲ್ಲಿಕಾರ್ಜುನಚಾರಿ ಇವರು ಒಂದನೇ ಪ್ರತಿವಾದಿಗಳಾದ ಪಿ.ವಿ. ಶ್ಯಾಮಲಾದೇವಿ ಇವರಲ್ಲಿ "ಡ್ರೈವರ್" ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಗೋವಿಂದಯ್ಯ**
ಪಿ.ಆರ್. 626 ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಪ್ರ:ಎಸ್ಆರ್-56:2005, ದಿನಾಂಕ: 4ನೇ ಏಪ್ರಿಲ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ಶಾಲನ್ ಗಂಡ ವಿಲಾಸ ಚವ್ಹಾಣ,
2. ವಿಶಾಲ ತಂದೆ ವಿಲಾಸ ಚವ್ಹಾಣ,
3. ಧನಶ್ರೀ ತಂದೆ ವಿಲಾಸ ಚವ್ಹಾಣ,
ವಾಸ: ಬಾಬನಗರ, ತಾಲ್ಲೂಕು:ಜಿಲ್ಲೆ-ಬಿಜಾಪುರ.

1. ಶ್ರೀಮತಿ ಬೀನಾ ಗಂಡ ಸಂಜಯ ಕಲಗೆ ಕೇರಾಫ್
ಸಂಜಯ ಕಲಗೆ ಫಾರ್ಮ್ ಹೌಸ್,
ಎಟ್ಪ್:ಪೋಸ್ಟ್-ರಾಮಪೂರ, ತಾಲ್ಲೂಕ-ಜತ್ತ,
ಜಿಲ್ಲೆ-ಸಾಂಗ್ಲ (ಮಹಾರಾಷ್ಟ್ರ ರಾಜ್ಯ)
2. ದಿ ಯುನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ:ಲಿ,
ಬಿಜಾಪುರ.

**ಪ್ರಕಟಣೆ**

ಶ್ರೀ:ಶ್ರೀಮತಿ ಶಾಲನ್ ಗಂಡ ವಿಲಾಸ ಚವ್ಹಾಣ, (2) ವಿಶಾಲ ತಂದೆ ವಿಲಾಸ ಚವ್ಹಾಣ, (3) ಧನಶ್ರೀ ತಂದೆ ವಿಲಾಸ ಚವ್ಹಾಣ ಇವರುಗಳಾದ ತಾವು ಮೃತ ವಿಲಾಸ ತಂದೆ ವಿಠಲ ಚವ್ಹಾಣ ಇವರ ಹೆಂಡತಿ ಮತ್ತು ಮಕ್ಕಳು ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ವಿಲಾಸ ತಂದೆ ವಿಠಲ ಚವ್ಹಾಣ ಇವರು ಒಂದನೇ ಪ್ರತಿವಾದಿಗಳಾದ ಶ್ರೀಮತಿ ಬೀನಾ ಗಂಡ ಸಂಜಯ ಕಲಗೆ ಇವರ ಟ್ರಕ್ಕ ಸಂಖ್ಯೆ-ಎಮ್‌ಹೆಚ್-10:ಎ-6992 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿ 30 ದಿನಗಳಗೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**
ಪಿ.ಆರ್. 627 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2 ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಉಪ ವಿಭಾಗ-2 ಬಿಜಾಪುರ**
**ಪ್ರಕರಣ ಸಂಖ್ಯೆ: ಕಾಅಬ:ಕಾನಪ:ಸಿಆರ್:57:2005, ದಿನಾಂಕ: 4ನೇ ಏಪ್ರಿಲ್ 2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀಮತಿ ನೀಲಮ್ಮ ಗಂಡ ಸಂಜೀವಪ್ಪ ತಳವಾರ
(ಅಂಬಿಗಾರ) ವಾಸ-ಇಂಗಳಗೇರಿ,
ತಾಲ್ಲೂಕ-ಮುದ್ದೇಬಿಹಾಳ, ಜಿಲ್ಲೆ-ಬಿಜಾಪುರ.
2. ಶ್ರೀ ಸಂಜೀವಪ್ಪ ತಂದೆ ಯಮನಪ್ಪ ತಳವಾರ
(ಅಂಬಿಗಾರ) ವಾಸ-ಇಂಗಳಗೇರಿ,
ತಾಲ್ಲೂಕು-ಮುದ್ದೇಬಿಹಾಳ, ಜಿಲ್ಲೆ-ಬಿಜಾಪುರ.

1. ಓಂಕಾರ ತಂದೆ ತುಳಸಿರಾಮ ಪವಾರ್,
ವಾಸ-ಎಂ.ಬಿ. ನಗರ ಹಿಂಭಾಗ, ವಿ ಪೊಲೀಸ್
ಸ್ಟೇಷನ್, ವರ್ಶಾ ನಗರ, ಗುಲ್ಬರ್ಗಾ.
2. ದಿ ಮ್ಯಾನೇಜರ್, ನ್ಯಾಷನಲ್ ಇನ್ಸೂರೆನ್ಸ್ ಕಂ. ಲಿ.,
ಬಿಜಾಪುರ.

**ಪ್ರಕಟಣೆ**

ಶ್ರೀ:ಶ್ರೀಮತಿ ನೀಲಮ್ಮ ಗಂಡ ಸಂಜೀವಪ್ಪ ತಳವಾರ್ (ಅಂಬಿಗಾರ) (2) ಸಂಜೀವಪ್ಪ ತಂದೆ ಯಮನಪ್ಪ ತಳವಾರ್ (ಅಂಬಿಗಾರ) ಇವರುಗಳಾದ ತಾವು ಮೃತ ಯಮನಪ್ಪ ಉರ್ಫ ಮುತ್ತಣ್ಣ ತಂದೆ ಸಂಜೀವಪ್ಪ ತಳವಾರ ಇವರ ತಂದೆ-ತಾಯಿ ಮತ್ತು - ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಯಮನಪ್ಪ ಉರ್ಫ ಮುತ್ತಣ್ಣ ತಂದೆ ಸಂಜೀವಪ್ಪ ತಳವಾರ ಇವರು

ಒಂದನೇ ಪ್ರತಿವಾದಿಗಳಾದ ಓಂಕಾರ ತಂದೆ ತುಳಸಿರಾಮ ಪವಾರ ಇವರ ಟಿಪ್ಪರ ಲಾರಿ ಸಂಖ್ಯೆ-ಕೆಎ:25:ಎ:6245 ರಲ್ಲಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನ ಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯ ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿ 30 ದಿನಗಳಗೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಜಿ. ಸಿದ್ಧಲಿಂಗಪ್ಪ ಆಲೂರು**

ಪಿ.ಆರ್. 628 ಕಾರ್ಮಿಕ ಪರಿಹಾರ ಆಯುಕ್ತರು, ಉಪವಿಭಾಗ-2 ಬಿಜಾಪುರ ಜಿಲ್ಲೆ, ಬಿಜಾಪುರ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಮಂಡ್ಯ ಉಪ ವಿಭಾಗ-2 ಮಂಡ್ಯ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:43/2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಶ್ರೀಮತಿ ಮಹಾಲಕ್ಷ್ಮಿ ಲೇಟ್ ಎಲ್.
ಮಹೇಶ್‌ಕುಮಾರ ತಂಗಿ, ಹರಳಹಳ್ಳಿ, ಪಾಂಡವಪುರ
ತಾ।। ಮಂಡ್ಯ ಜಿಲ್ಲೆ.

ಮುಖ್ಯ ಕಾರ್ಯನಿರ್ವಾಹಕ
ಎಸ್.ಸಿ.ಎಂ. ಷುಗರ್ಸ್ ಲಿ. ಕೊಪ್ಪ, ಮದ್ದೂರು ತಾ।।
ಮಂಡ್ಯ ಜಿಲ್ಲೆ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಮಹಾಲಕ್ಷ್ಮಿ ಅವರು ತಮ್ಮ ತಮ್ಮನಾದ ಶ್ರೀ ಎಲ್. ಮಹೇಶ್ ಕುಮಾರ ಅವರು ಒಂದನೇ ಪ್ರತಿವಾದಿ ಶ್ರೀ:ಶ್ರೀಮತಿ ಎಸ್.ಸಿ.ಎಂ. ಷುಗರ್ಸ್ ಲಿ. ರವರ ಬಳಿ ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 29.11.04 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 2.2.2005 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,

ಪಿ.ಆರ್. 629 ಮಂಡ್ಯ ಉಪವಿಭಾಗ-2, ಮಂಡ್ಯ-571 401.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಮಂಡ್ಯ ಉಪ ವಿಭಾಗ-2 ಮಂಡ್ಯ**

**ಪ್ರಕರಣ ಸಂಖ್ಯೆ: ಡಬ್ಲ್ಯೂಸಿಎ:ಎಫ್‌ಸಿ:48/2005**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಮಿ।। ಜೇಮ್ಸ್, ಸೆಲ್ವಿನ ಪೇಟ್ಯೆ ಪೊಲ್ಲೂರು ಪೋಸ್ಟ್,
ತಿರುನಾಮಲ್ಯೆ ಜಿಲ್ಲೆ, ತಮಿಳುನಾಡು.

ಮುಖ್ಯಕಾರ್ಯನಿರ್ವಾಹಕ
ಎಸ್.ಸಿ. ಎಂ. ಷುಗರ್ಸ್ ಲಿ., ಕೊಪ್ಪ ಮದ್ದೂರು ತಾ।।

**ಅಧಿಸೂಚನೆ**

ಅರ್ಜಿದಾರರಾದ ಜೇಮ್ಸ್ ಅವರು ತಮ್ಮ ಮಗನಾದ ವಿಮಲ್ ಕುಮಾರ ಅವರು ಒಂದನೇ ಪ್ರತಿವಾದಿ ಶ್ರೀ:ಶ್ರೀಮತಿ ಎಸ್.ಸಿ.ಎಂ. ಷುಗರ್ಸ್ ಲಿ. ರವರ ಬಳಿ ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ: 28.11.04 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ : ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ: 2.2.2005 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,

ಪಿ.ಆರ್. 630 ಮಂಡ್ಯ ಉಪವಿಭಾಗ-2, ಮಂಡ್ಯ-571 401.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ**

**ವಿಷಯ:** 2005-06 ರಿಂದ 2009-2010ನೇ ಸಾಲುಗಳ ಅವಧಿಗೆ ಆಡಳಿತ ಮಂಡಳಿಯ ಚುನಾವಣೆ ನಡೆಸದೆ ಇರುವ ಕಾರಣ ಕಲಂ 28ಎ(5) ಮತ್ತು 28ಬಿ(2) ರನ್ವಯ ಕ್ರಮವಿಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿಯ ಆದೇಶದ ಸಂಖ್ಯೆ:ಸನಿ47/ ಚುನಾವಣೆ/39/2004-05 ದಿ: 5.2.2005.
2. ಚುನಾವಣಾಧಿಕಾರಿಗಳ ಪತ್ರದ ದಿನಾಂಕ 31.3.2005.
3. ಸರ್ಕಾರದ ಆದೇಶದ ಸಂಖ್ಯೆ:ಸಿಎಂಡಬ್ಲ್ಯೂ/37/ಸಿಎಲ್ಎಂ/2004 ದಿ:4.2.2005.
4. ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ/69/ಸಿಎಲ್ಎಂ/2001 ದಿ:21.11.2001.

**ಪ್ರಸ್ತಾವನೆ:**

ಉಲ್ಲೇಖ (1)ರ ಈ ಕಛೇರಿಯ ಆದೇಶದಲ್ಲಿ ಬಾಗಲೂರು ಹಾಲು ಉತ್ಪಾದಕರ ಸಹಕಾರ ಸಂಘ (ನಿ), ಹೊಸಕೋಟೆ ತಾಲ್ಲೂಕು ಈ ಸಂಘದ 2005-2006 ರಿಂದ 2009-2010ನೇ ಸಾಲುಗಳ ಆಡಳಿತ ಮಂಡಳಿ ಸದಸ್ಯರ ಚುನಾವಣೆಯನ್ನು ದಿನಾಂಕ:31.3.2005 ರೊಳಗೆ ನಡೆಸಲು ಚುನಾವಣಾಧಿಕಾರಿಯನ್ನು ನೇಮಕ ಮಾಡಲಾಗಿತ್ತು. ಆದರೆ ಉಲ್ಲೇಖ (2)ರಲ್ಲಿ ಚುನಾವಣಾಧಿಕಾರಿಗಳು, ಸಂಘದ ಆಡಳಿತ ಮಂಡಳಿಯವರು ನಿಗದಿತ ಅವಧಿಯಲ್ಲಿ ಚುನಾವಣೆ ನಡೆಸಲು ವಿಫಲರಾಗಿರುವುದಾಗಿ ತಿಳಿಸುತ್ತಾ ಕಾನೂನಿನ ಪ್ರಕಾರ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 28ಬಿ (2) ರನ್ವಯ ದಿನಾಂಕ:31.3.2005 ರೊಳಗೆ ಆಡಳಿತ ಮಂಡಳಿ ಚುನಾವಣೆ ನಡೆಸಲು ವಿಫಲರಾಗಿರುವ ಆಡಳಿತ ಮಂಡಳಿ ಸದಸ್ಯರು ಪ್ರಸ್ತಾಪಿತ ಸಂಘದಲ್ಲಿ ಐದು ವರ್ಷಗಳ ಅವಧಿಯವರೆಗೆ ಚುನಾವಣೆಗೆ ಸ್ಪರ್ಧಿಸಲು ಅನರ್ಹರಾಗಿರುತ್ತಾರೆ ಹಾಗೂ ಸದರಿ ಸಂಘದ ಆಡಳಿತ ಮಂಡಳಿ ಸ್ಥಾನದಲ್ಲಿ ಸಂಘದ ದೈನದಿಂದ ವ್ಯವಹಾರ ನಡೆಸಲು ಕಲಂ 28ಎ(5) ರನ್ವಯ ಆಡಳಿತಾಧಿಕಾರಿಯನ್ನು ನೇಮಕ ಮಾಡುವ ಅವಶ್ಯಕತೆ ಉಂಟಾಗಿರುತ್ತದೆ. ಆದ್ದರಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ಕ್ರಮಾಂಕ:ಸನಿ47/ಅಮರ/12/2005-06, ದಿನಾಂಕ: 1ನೇ ಏಪ್ರಿಲ್ 2005**

ಪ್ರಸ್ತಾವೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಎಂ. ಚನ್ನಭೈರಯ್ಯ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ, ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 28ಎ(5) ರ ಪ್ರಕಾರ ಹಾಗೂ ಉಲ್ಲೇಖ (4)ರ ಸರ್ಕಾರದ ಅಧಿಸೂಚನೆಯಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಬಾಗಲೂರು ಹಾಲು ಉತ್ಪಾದಕರ ಸಹಕಾರ ಸಂಘ (ನಿ), ಹೊಸಕೋಟೆ ತಾಲ್ಲೂಕು ಇದರ ಆಡಳಿತ ಮಂಡಳಿಯನ್ನು ರದ್ದುಪಡಿಸಿ ಈ ಸಂಘಕ್ಕೆ ಸಂಬಂಧಪಟ್ಟ ವಿಸ್ತೀರ್ಣಾಧಿಕಾರಿ ಹಾಲು ಉತ್ಪಾದಕರ ಒಕ್ಕೂಟ ಹೊಸಕೋಟೆ ಶಿಬಿರ ಇವರನ್ನು ಈ ಆದೇಶದ ದಿನಾಂಕದಿಂದ 6 ತಿಂಗಳ ಅವಧಿಗೆ ವಿಶೇಷಾಧಿಕಾರಿಯಾಗಿ ನೇಮಕ ಮಾಡಿ ಆದೇಶ ಹೊರಡಿಸಿರುತ್ತೇನೆ.

ಆಡಳಿತಾಧಿಕಾರಿಗಳು ಈ 6 ತಿಂಗಳ ಅವಧಿಯೊಳಗಾಗಿ ಸಂಘದ ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತವಾಗುವ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡಲು ಆದೇಶಿಸಿದೆ.

ಆಡಳಿತಾಧಿಕಾರಿಗಳು ಸಂಘದ ಆಡಳಿತ ಮಂಡಳಿಯ ಪ್ರಭಾರವನ್ನು ವಹಿಸಿಕೊಂಡು ಆಡಳಿತ ಮಂಡಳಿಯ ಎಲ್ಲಾ ಕರ್ತವ್ಯಗಳನ್ನು ಸಹಕಾರ ಸಂಘಗಳ ಕಾಯಿದೆ ನಿಯಮ ಮತ್ತು ಸಂಘದ ಉಪನಿಯಮಗಳ ಪ್ರಕಾರ ಕಾರ್ಯನಿರ್ವಹಿಸಲು ಆದೇಶಿಸಿದೆ. ಆಡಳಿತಾಧಿಕಾರಿಗಳು ಈ ಕಛೇರಿಯ ನಿಯಂತ್ರಣಕ್ಕೆ ಒಳಪಟ್ಟ ಕೆಲಸ ನಿರ್ವಹಿಸುವುದು. ಆಡಳಿತಾಧಿಕಾರಿಗಳ ಅಧಿಕಾರ ಅವಧಿಯು ಆಡಳಿತ ಮಂಡಳಿಗೆ ಚುನಾವಣೆ ನಡೆಸಿ ಹೊಸದಾಗಿ ರಚಿತಗೊಂಡ ಆಡಳಿತ ಮಂಡಳಿಗೆ ಅಧಿಕಾರ ವಹಿಸಿಕೊಡುವ ಅಥವಾ ಈ ಅವಧಿಯ ದಿನಾಂಕದಿಂದ 6 ತಿಂಗಳ ಒಳಗೆ ಅವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆವಿಗೂ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ನನ್ನ ಸ್ವಹಸ್ತಾಕ್ಷರ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ:1.4.2005 ರಂದು ಹೊರಡಿಸಿರುತ್ತೇನೆ.

**ಎಂ. ಚನ್ನಭೈರಯ್ಯ**

ಪಿ.ಆರ್. 631 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ ಉಪವಿಭಾಗ, ದೊಡ್ಡಬಳ್ಳಾಪುರ.

**ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರುರವರ ನ್ಯಾಯಾಲಯದಲ್ಲಿ**

**ಉಪಸ್ಥಿತರು**

ಶ್ರೀ ಎನ್.ಎಂ. ಹುಸೇನ್,

ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

**ಫಿರ್ಯಾದುದಾರರು**

ಅಬಕಾರಿ ನಿರೀಕ್ಷಕರು
ಸುರತ್ಕಲ್ ಉಪ ವಿಭಾಗ, ಸುರತ್ಕಲ್

**ಆಪಾದಿತರು**

1. ಲಕ್ಷ್ಮೀನಾರಾಯಣ, ಬಿನ್ ಕಾಲಸಿಂಗ್,
   ಗುರುಗಾನ್, ಹರಿಯಾಣ.
2. ಪಾಲ್ ಸಿಂಗ್,
   ಬಿನ್:ಸೂಜೀತ್ ಸಿಂಗ್, ಬಿಡಿಯಾಳ ಗ್ರಾಮ,
   ಕಾನಗಾಡ ಜಿಲ್ಲೆ, ಹಿಮಾಚಲ ಪ್ರದೇಶ.

**ಅರ್ಜಿದಾರರು:**

1. ಶ್ರೀಮತಿ ಪೂನಂ ಯಾದವ್,
   ಕೋಂ: ರಾಜು ಯಾದವ್, ನಿವಾಸ:589/16 ಸಿವಿಲ್ ಲೈನ್ಸ್ ಗುರುಗಾನ್ಸ್, ಹರಿಯಾಣ ರಾಜ್ಯ ಇವರ ಜಿ.ಪಿಎ. ದಾರರಾದ ಶ್ರೀ ಬ್ರಹ್ಮ ಪಾಲ್ ಯಾದವ್, ಬಿನ್:ಆರ್.ಕೆ. ಯಾಧವ್, 589/16, ಸಿವಿಲ್ ಲೈನ್ಸ್, ಗುರುಗಾನ್, ಹರಿಯಾಣ ರಾಜ್ಯ.
2. ಮೆ: ಮೆಕ್‌ಡೆವೆಲ್ ಅಂಡ್ ಕಂಪೆನಿ ಲಿ.,
   51 ರಿಚ್‌ಮಂಡ್ ರೋಡ್, ಬೆಂಗಳೂರು-25
   ಇದರ ಮೇಲಾಧಿಕಾರಿಯವರಾದ ಶ್ರೀ ಎ. ಸಂತೋಷ್
   ಕುಮಾರ್ ಬಿನ್: ಎ. ಐತ್ತಪ್ಪ ಮೇಜರ್, ಬೆಂಗಳೂರು.

**ಪ್ರಕರಣದ ಮುಖ್ಯಾಂಶಗಳು:**

ದಿನಾಂಕ:10.7.97 ರಂದು ರಾತ್ರಿ 11-00 ಗಂಟೆ ಸಮಯದಲ್ಲಿ ಮಂಗಳೂರು ತಾಲ್ಲೂಕು ಸುರತ್ಕಲ್‌ನ ಮುಕ್ಕದ ವಾಣಿಜ್ಯ ತೆರಿಗೆ ತನಿಖಾ ಠಾಣೆಯ ಎದುರು ರಾಷ್ಟ್ರೀಯ ಹೆದ್ದಾರಿ 17ರಲ್ಲಿ ಅಬಕಾರಿ ನಿರೀಕ್ಷಕರು, ಸುರತ್ಕಲ್ ಉಪ ವಿಭಾಗ, ಸುರತ್ಕಲ್ ಇವರು ಹಾಗೂ ಅಬಕಾರಿ ಉಪ ಅಧೀಕ್ಷಕರು ಸುರತ್ಕಲ್ ಉಪ ವಿಭಾಗ, ಸುರತ್ಕಲ್ ಮತ್ತು ತಮ್ಮ ಸಿಬ್ಬಂದಿಗಳೊಂದಿಗೆ ರಸ್ತೆಗಾವಲು ನಡೆಸುತ್ತಿರುವ ಸಮಯದಲ್ಲಿ ಉಡುಪಿ ಕಡೆಯಿಂದ ಒಂದು ಟ್ಯಾಂಕರ್ ಬರುತ್ತಿರುವುದನ್ನು ನೋಡಿ ತಡೆದು ನಿಲ್ಲಿಸಿದರು. ಸದರಿ ಟ್ಯಾಂಕರ್‌ನ ನೊಂದಣಿ ಸಂ:ಹೆಚ್‌ಆರ್:47-2874 ವಿದ್ದು, ಸದರಿ

ಟ್ಯಾಂಕರಿನಲ್ಲಿ ಚಾಲಕ ಹಾಗೂ ಇನ್ನೊಬ್ಬ ವ್ಯಕ್ತಿ ಇದ್ದು, ಸದರಿ ಟ್ಯಾಂಕರಿನಲ್ಲಿರುವ ಸರಕಿನ ಬಗ್ಗೆ ವಿಚಾರಿಸಲಾಗಿ ಟ್ಯಾಂಕರಿನಲ್ಲಿ ಸ್ಪಿರಿಟ್ ಇದೆಯೆಂದು ತಿಳಿಸಿದನು. ನಂತರ ಚಾಲಕ ಹಾಜರುಪಡಿಸಿದ ದಾಖಲೆಗಳನ್ನು ಪರಿಶೀಲಿಸಿದಾಗ, ಕೇರಳ ಸರ್ಕಾರದಿಂದ ನೀಡಿದ ಆಮದು ರಹದಾರಿ ದಿ:24.6.97 ವಾಯದೆ ದಿ:18.7.98 ಆಗಿದ್ದು ಪಂಜಾಬ್ ಚಂಢಿಗಡ ಡಿಸ್ಟಿಲರಿ ಮತ್ತು ಬಾಟಲಿಂಗ್ ಬನ್ನೂರು ಪಾಟೀಯಾಲ ಜಿಲ್ಲೆ ಇಲ್ಲಿಂದ ಮೆ: ಮೆಕ್‌ಡೆವಲ್ ಕಂಪೆನಿ ನಿಯಮಿತ, ಚೆರ್ಕಳ ಜಿಲ್ಲೆ, ಕೇರಳ ರಾಜ್ಯ ಇಲ್ಲಿಗೆ 20,000 ಲೀಟರು ಮದ್ಯಸಾರ ಸಾಗಾಣಿಕೆಗೆ ರಹದಾರಿ ಇದ್ದು, ಆದರೆ ಮದ್ಯಸಾರವನ್ನು ಕರ್ನಾಟಕ ರಾಜ್ಯದ ಮೂಲಕ ಸಾಗಾಣಿಕೆ ಮಾಡಲು ಅಗತ್ಯವಿರುವ ಟ್ರಾನ್ಸಿಟ್ ರಹದಾರಿ ಪತ್ರ ಇರಲಿಲ್ಲ. ಈ ಕಾರಣದಿಂದ ಕರ್ನಾಟಕ ಅಬಕಾರಿ ಕಾಯಿದೆ 1965ರ ರೀತ್ಯಾ ಅಪರಾಧವಾಗಿರುವುದರಿಂದ ಪ್ರಥಮ ಮಾಹಿತಿ ವರದಿಯನ್ನು ತಯಾರಿಸಿ ಮೊಕದ್ದಮೆ ದಾಖಲಿಸಿ ಸದರಿ ಟ್ಯಾಂಕರಿನಲ್ಲಿ ಇದ್ದ ನಾಲ್ಕು ವಿಭಾಗದಲ್ಲಿ, ಪ್ರತಿ ವಿಭಾಗದಲ್ಲಿ ಸಾಧಾರಣಾ 5000 ಲೀಟರಿನಂತೆ ಒಟ್ಟು 20,000 ಲೀಟರು ಮದ್ಯಸಾರ ಮತ್ತು ವಾಹನವನ್ನು ವಶಕ್ಕೆ ತೆಗೆದುಕೊಂಡು, ಸದರಿ ಪ್ರತಿ ವಿಭಾಗದಿಂದ 750 ಎಂಎಲ್‌ನ 3 ಸೀಸೆಗಳಂತೆ ಒಟ್ಟು 12 ಸೀಸೆಗಳನ್ನು ರಾಸಾಯನಿಕ ಪರೀಕ್ಷೆಗಾಗಿ ತೆಗೆದಿರಿಸಿ ಪಂಚರ ಸಮಕ್ಷಮ ಇಲಾಖಾ ಮೊಹರು ಮಾಡಿದ್ದು, ಲಾರಿ ಚಾಲಕ ಹಾಗೂ ಇನ್ನೊಬ್ಬ ವ್ಯಕ್ತಿಯ ಹೆಸರು ವಿಳಾಸ ಕೇಳಿ ತಿಳಿದುಕೊಂಡು ಸದರಿ ಸೊತ್ತುಗಳನ್ನು ಇಲಾಖಾ ವಶಕ್ಕೆ ತೆಗೆದುಕೊಂಡು ಸ್ಥಳದಲ್ಲಿ ಮಹಜರು ಜರುಗಿಸಿ, ಸ್ಥಳದಲ್ಲಿ ತಯಾರಿಸಿದ ದಾಖಲಾತಿಗಳೊಂದಿಗೆ, ಸದರಿ ಸೊತ್ತುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಈ ಪ್ರಾಧಿಕಾರಕ್ಕೆ ಅಬಕಾರಿ ನಿರೀಕ್ಷಕರು, ಸುರತ್ಕಲ್ ಉಪ ವಿಭಾಗ, ಸುರತ್ಕಲ್ ಇವರು ವರದಿಯನ್ನು ಸಲ್ಲಿಸಿರುತ್ತಾರೆ. ಮತ್ತು ವಶಪಡಿಸಿಕೊಂಡ ವಾಹನ ಹಾಗೂ ಮದ್ಯಸಾರವನ್ನು ಮುಂದಿನ ತನಿಖೆಯ ಬಗ್ಗೆ ಅಬಕಾರಿ ನಿರೀಕ್ಷಕರು, ಸುರತ್ಕಲ್ ವಲಯ, ಸುರತ್ಕಲ್ ಇವರ ವಶದಲ್ಲಿ ಇಟ್ಟುಕೊಳ್ಳಲು ಅನುಮತಿ ಪಡೆದಿರುತ್ತಾರೆ.

ದಿ:3.10.97 ರಂದು ಶ್ರೀಮತಿ ಪೂನಂ ಯಾದವ್ ಎಂಬುವರು ಈ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನ ಸಂ: ಹೆಚ್‌ಆರ್:47:2874ರ ಆರ್.ಸಿ. ಮಾಲಿಕಳೆಂದು ಈ ಪ್ರಾಧಿಕಾರದ ಮುಂದೆ ತಮ್ಮ ವಕೀಲರ ಮೂಲಕ ಹಾಜರಾಗಿ ಒಂದು ಅರ್ಜಿಯನ್ನು ಸಲ್ಲಿಸಿ, ವಾಹನವನ್ನು ತನಗೆ ಮಧ್ಯಂತರ ಸ್ವಾಧೀನಕ್ಕೆ ಬಿಟ್ಟುಕೊಡಬೇಕೆಂದು ಕೇಳಿಕೊಂಡಿರುತ್ತಾರೆ. ಈ ಪ್ರಕರಣದಲ್ಲಿ ಮೆಕ್‌ಡೆವಲ್ ಕಂಪೆನಿ ಇವರು ಕೂಡಾ ಹಾಜರಾಗಿದ್ದು, ಅರ್ಜಿಯನ್ನು ಸಲ್ಲಿಸಿರುತ್ತಾರೆ. ವಾಹನ ಮಾಲೀಕಳೆಂದು ಕೇಳುವ ಶ್ರೀಮತಿ ಪೂನಂ ಯಾದವ್ ಮತ್ತು ಮೆಕ್‌ಡೆವಲ್ ಕಂಪೆನಿ ಇವರಿಗೆ ಕಾರಣ ಕೇಳಿ ನೋಟಿಸನ್ನು ನೀಡಲಾಗಿದೆ. ಸದರಿ ನೋಟಿಸಿಗೆ ಉತ್ತರವಾಗಿ ಶ್ರೀಮತಿ ಪೂನಂ ಯಾದವ್ ಇವರು ಒಂದು ಲಿಖಿತ ವಿವರವನ್ನು ದಿ:3.10.97 ರಂದು ಸಲ್ಲಿಸಿರುತ್ತಾರೆ. ಇದೇ ರೀತಿ ಮೆಕ್‌ಡೆವಲ್ ಕಂಪೆನಿ ಇವವ ಪರವಾಗಿ ಶ್ರೀ ಎ. ಸಂತೋಷ್ ಕುಮಾರ್ ಇವರ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸದರಿಯವರು ತಮ್ಮ ಹೇಳಿಕೆಯಲ್ಲಿ ವಾಹನ ಸಂ: ಹೆಚ್‌ಆರ್-47-2874 ರಲ್ಲಿ 20,000 ಲೀಟರು ಮದ್ಯಸಾರವನ್ನು ಪಂಜಾಬಿನ ರಾಜ್ಯದಲ್ಲಿರುವ ಚಂಡಿಗಢ್ ಡಿಸ್ಟಿಲರಿಯಿಂದ ಕೇರಳ ರಾಜ್ಯದಲ್ಲಿರುವ ಮೆಕ್ ಡೆವಲ್ ಕಂಪೆನಿ ನಿಯಮಿತ ಚೇರ್ತಳ ಅಲ್ಲೆಪ್ಪ ಡಿಸ್ಟಿಲರಿ ಕೇರಳಕ್ಕೆ ಸಾಗಾಣಿಕೆ ಮಾಡಿದ್ದು,, ಕಾನೂನುಬದ್ಧವಾಗಿದೆ ಮತ್ತು ಕರ್ನಾಟಕ ಅಬಕಾರಿ ಅಧಿನಿಯಮದಲ್ಲಿ ಯಾವುದೇ ಶಿಕ್ಷಾರ್ಹಕ ಅಪರಾಧವಾಗಿಲ್ಲ. ರಾಜ್ಯದಿಂದ ಕೇರಳಕ್ಕೆ ಕರ್ನಾಟಕ ರಾಜ್ಯದ ಮೂಲಕ ವಾಹನದಲ್ಲಿ ಮದ್ಯಸಾರ (ಇಎನ್‌ಎ) ವನ್ನು ಸಾಗಾಟ ಮಾಡಲು Karnataka Excise (Liqour Transit) Rules 1985ರ ಅಡಿಯಲ್ಲಿ ಯಾವುದೇ ರಹದಾರಿ ಪತ್ರವನ್ನು ತೆಗೆದುಕೊಳ್ಳುವ ಅವಶ್ಯಕತೆಯಿಲ್ಲವೆಂದು ನುಡಿದಿರುತ್ತಾರೆ.

ಈ ಪ್ರಕರಣದ ವಿಚಾರಣೆ ಕೈಗೊಂಡು ಶ್ರೀ ಎಂ. ಸಂಜೀವ ಪೂಜಾರಿ ಅಬಕಾರಿ ನಿರೀಕ್ಷಕರು, ಸುರತ್ಕಲ್ ಇವರನ್ನು ಪಿಡಬ್ಲ್ಯೂ-1 ಎಂದು ವಿಚಾರಣೆ ಮಾಡಲಾಗಿದೆ. ಮತ್ತು ಪ್ರಕರಣದಲ್ಲಿ ಸಂಬಂಧಿಸಿದ ದಾಖಲಾತಿಗಳನ್ನು ಪರಿಗಣಿಸಲಾಯಿತು.

ಈ ಪ್ರಕರಣದಲ್ಲಿ ಈ ಕೆಳಗಿನಂತೆ ವಿವಿಧಾಂಶಗಳನ್ನು ಪರಿಗಣಿಸಲಾಯಿತು.

1) ಪ್ರಕರಣದಲ್ಲಿ ಕರ್ನಾಟಕ ಅಬಕಾರಿ ಅಧಿನಿಯಮದಡಿ ಶಿಕ್ಷಾರ್ಹಕ ಅಪರಾಧವಾಗಿದೆಯೇ?

2) ದಿನಾಂಕ: 10.7.97 ರಂದು ಟ್ಯಾಂಕರ್ ಸಂ:ಹೆಚ್‌ಆರ್-47-2874 ರಲ್ಲಿ ಅಕ್ರಮವಾಗಿ ಮದ್ಯ ಸಾರವನ್ನು ಸಾಗಣಿಕೆ ಮಾಡಲಾಗಿತ್ತೇ?

3) ಸದರಿ ವಾಹನದ ಮಾಲೀಕರು ತಮ್ಮ ಗಮನಕ್ಕೆ ಬಾರದೇ ವಾಹನವನ್ನು ಉಪಯೋಗಿಸಲಾಗಿದೆಯೇ ಎಂಬುದನ್ನು ರುಜುವಾತು ಪಡಿಸಿದ್ದಾರೆಯೇ?

4) ಜಪ್ತಿಪಡಿಸಿರುವ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದೇ?

ಈ ಮೇಲಿನ ಪರಿಶೀಲನಾಂಶಗಳನ್ನು ಲಭ್ಯವಿರುವ ಸಾಕ್ಷಿ ಹಾಗೂ ದಾಖಲೆಗಳ ಆಧಾರದ ಮೇಲೆ ಈ ಕೆಳಗಿನಂತೆ ಉತ್ತರಿಸಿರುತ್ತೇನೆ.

ಒಂದನೇ ಮತ್ತು ಎರಡನೇ ವಿವಿಧಾಂಶವನ್ನು ಸಕಾರಾತ್ಮಕವಾಗಿ ಹಾಗೂ ಮೂರನೇ ವಿವಿಧಾಂಶವನ್ನು ಮತ್ತು ನಾಲ್ಕನೇ ವಿವಿಧಾಂಶವನ್ನು ಅಂತಿಮ ಆದೇಶದಂತೆ.

ಈ ಪ್ರಕರಣದಲ್ಲಿ ವಿಚಾರಣೆ ಸಮಯದಲ್ಲಿ ಸುರತ್ಕಲ್ ಉಪ ವಿಭಾಗದ ಅಬಕಾರಿ ನಿರೀಕ್ಷಕರಾದ ಶ್ರೀ ಎಂ. ಸಂಜೀವ ಪೂಜಾರಿಯವರು ದಿ: 15.1.98 ರಂದು ಈ ಪ್ರಾಧಿಕಾರದ ಮುಂದೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಸದರಿಯವರು ಸಾಕ್ಷಿ ನುಡಿಯುತ್ತಾ, ತಾನು ದಿ:10.7.97 ರಂದು ರಾತ್ರಿ 11-00 ಗಂಟೆಗೆ ಸುರತ್ಕಲ್ ಉಪ ವಿಭಾಗದ ಅಧೀಕ್ಷಕರು ಹಾಗೂ ತಮ್ಮ ಸಿಬ್ಬಂದಿಯವರೊಂದಿಗೆ ಮಂಗಳೂರು ತಾಲ್ಲೂಕು ಸುರತ್ಕಲ್‌ನ ಮುಕ್ಕದಲ್ಲಿರುವ ವಾಣಿಜ್ಯ ತಪಾಸಣಾ ಠಾಣಾದ ಹತ್ತಿರ ರಸ್ತೆಗಾವಲು ಮಾಡುತ್ತಿರುವಾಗ ಉಡುಪಿ ಕಡೆಯಿಂದ ಒಂದು ಟ್ಯಾಂಕರ್ ಬರುವುದನ್ನು ಕಂಡು ನಿಲ್ಲಿಸಲು ಸೂಚನೆ ನೀಡಿದಾಗ ಸದರಿ ಟ್ಯಾಂಕರನ್ನು ನಿಲ್ಲಿಸಿದ ನಂತರ ಇದನ್ನು ಪರಿಶೀಲಿಸಲಾಗಿ ಅದರ ನೊಂದಣೆ ಸಂಖ್ಯೆ:ಹೆಚ್‌ಆರ್-47-2874 ಎಂದು ಅದರಲ್ಲಿ ಚಾಲಕ ಮತ್ತು ಇನ್ನೊಬ್ಬ ವ್ಯಕ್ತಿ ಇದ್ದರು. ಟ್ಯಾಂಕರಿನಲ್ಲಿ ಸರಕಿನ ಬಗ್ಗೆ ವಿಚಾರಣೆ ಮಾಡಿದಾಗ ಅದರಲ್ಲಿ ಸ್ಪಿರಿಟ್ ಇದೆಯೆಂದು ತಿಳಿಸಿದನು. ನಂತರ ಚಾಲಕನು ಹಾಜರುಪಡಿಸಲಾದ ದಾಸ್ತಾವೇಜು ಪರಿಶೀಲಿಸಿದಾಗ, ಕೇರಳ ಸರ್ಕಾರದಿಂದ ನೀಡಿದ ಆಮದು ರಹದಾರಿ ನಂತರ ಚಂಢಿಗಡ್ ಡಿಸ್ಟಿಲರಿ ಇಲ್ಲಿಂದ ಕೇರಳ ರಾಜ್ಯಕ್ಕೆ ಸಾಗಿಸಲು ರಹದಾರಿ ಕೊಡಲಾಗಿದ್ದು, ಚಂಢಿಗಡ್ ಡಿಸ್ಟಿಲರಿಯಿಂದ 20,000 ಲೀಟರು ಮದ್ಯಸಾರವನ್ನು ಸಾಗಿಸಲು ಇನ್‌ವಾಯಿಸ್ ನಂ:202ರಲ್ಲಿ ಕೇರಳಕ್ಕೆ ಸಾಗಿಸಲು ಬಿಡುಗಡೆ ಮಾಡಿ ಅದರ ಇನ್‌ವಾಯಿಸ್‌ನಲ್ಲಿ ಎಕ್ಸೈಜ್ ಪಾಸ್ ಎಂದು ಕಾಣಿಸಲಾಗಿದೆ. ಆದರೆ ಮದ್ಯಸಾರ ರಫ್ತು ಮಾಡುವ ರಹದಾರಿ ಕಂಡುಬರಲಿಲ್ಲ. ಅಲ್ಲದೇ ಸದರಿ ಮದ್ಯಸಾರ ಟ್ಯಾಂಕರ್ ಕರ್ನಾಟಕ ರಾಜ್ಯದ ಮೂಲಕ ಹಾದು ಹೋಗಲು ರಹದಾರಿ ಇರುವುದಿಲ್ಲ. ಟ್ಯಾಂಕರನ್ನು ಪರಿಶೀಲಿಸಲಾಗಿ 20,000 ಲೀಟರು ಮದ್ಯಸಾರ ಇರುವುದು ಕಂಡು ಬಂತು ಎಂಬುದಾಗಿ ನುಡಿದಿರುತ್ತಾರೆ. ಈ ಕಾರಣದಿಂದ ವಾಹನ ಮತ್ತು ವಾಹನದಲ್ಲಿದ್ದ ಮದ್ಯಸಾರ ಮತ್ತು ಆರೋಪಿಗಳನ್ನು ವಶಕ್ಕೆ ತೆಗೆದುಕೊಂಡು ನಿಶಾನೆ ಪಿ-1 ರಂತೆ ಮಹಜರನ್ನು, ನಿಶಾನೆ ಪಿ-2 ರಂತೆ ಪ್ರ.ಮಾ.ವರದಿಯನ್ನು ತಯಾರಿಸಲಾಯಿತು ಎಂದು ನುಡಿದಿರುತ್ತಾರೆ. ತಕ್ಷೀರಿನಲ್ಲಿ ಪಡಕೊಂಡ ಮಾದರಿ ಸೀಸೆಗಳನ್ನು ಮಂಗಳೂರು ರಾಸಾಯನಿಕ ತಜ್ಞರಿಗೆ ಕಳುಹಿಸಲಾಯಿತು. ತಜ್ಞರಿಂದ ವಿಶ್ಲೇಷಣಾ ವರದಿ ತಲುಪಿದ್ದು, ಅದನ್ನು ನಿಶಾನೆ ಪಿ-3 ಎಂದು ಗುರುತಿಸಲಾಯಿತು. ಈ ಸಾಕ್ಷಿಯನ್ನು ಎದುರು ಪರ ವಕೀಲರು ಪಾರ್ಟಿ ಸವಾಲು ಮಾಡಿರುತ್ತಾರೆ.

ಪ್ರಕರಣದಲ್ಲಿ ವಾಹನ ಮಾಲೀಕರು ಮತ್ತು ವಶಪಡಿಸಿಕೊಂಡ ಮದ್ಯಸಾರ ತಮ್ಮದೆಂದು ಹೇಳಲು ಮೆಕ್‌ಡೆವಲ್ ಕಂಪೆನಿರವರು ಸಲ್ಲಿಸಿದ ಅರ್ಜಿಯಲ್ಲಿ ಪಂಜಾಬು ರಾಜ್ಯದಿಂದ ಕೇರಳ ರಾಜ್ಯಕ್ಕೆ ದಿ:10.7.97 ರಂದು ಕರ್ನಾಟಕ ರಾಜ್ಯದ ಮೂಲಕ ವಾಹನ ಸಂ: ಹೆಚ್‌ಆರ್-47-2874 ರಲ್ಲಿ ಮದ್ಯಸಾರ ಸಾಗಾಟ ಮಾಡಿದ ವಿಷಯವನ್ನು ಅಲ್ಲಗಳೆದಿಲ್ಲ. ಸದರಿಯವರು ತಮ್ಮಲ್ಲಿ ಕಾನೂನಿನಂತೆ ಎಲ್ಲಾ ದಾಖಲೆಗಳು ಇರುತ್ತದೆ ಎಂದು

ದಾಖಲೆಗಳನ್ನು ಹಾಜರುಪಡಿಸಿರುತ್ತಾರೆ. ಸದರಿಯವರು ತಮ್ಮ ಅರ್ಜಿಯಲ್ಲಿ ಮದ್ಯಸಾರವನ್ನು ಸಾಗಾಟ ಮಾಡಲು Karnataka Excise (Liquor Transit) Rules 1985 ರಡಿಯಲ್ಲಿ ಯಾವುದೇ ರಹದಾರಿ ಪತ್ರ ಬೇಕಾಗಿಲ್ಲ ಎಂಬುವುದಾಗಿ ನುಡಿದಿರುತ್ತಾರೆ. ವಿಚಾರಣೆ ಸಮಯ ವಾಹನದ ಮಾಲೀಕರು ಮತ್ತು ಮೆಕ್ ಡೆವೆಲ್ ಕಂಪೆನಿ ಇವರು ಮಾನ್ಯ ಸೆಷನ್ ನ್ಯಾಯಾಲಯದ ಆದೇಶವನ್ನು ಈ ಪ್ರಾಧಿಕಾರದ ಗಮನಕ್ಕೆ ತಂದಿರುತ್ತಾರೆ. ಸದರಿ ಆದೇಶವನ್ನು ಮಾನ್ಯ ಸೆಷನ್ ನ್ಯಾಯಾಲಯ, ಮಂಗಳೂರು ಇವರು ಸಿಆರ್‌ಆರ್‌ಪಿ:305/99 ದಿ:17.8.99 ರಲ್ಲಿ ಆದೇಶ ಮಾಡಿ ವಾಹನದ ಮಾಲೀಕರಾದ ಶ್ರೀಮತಿ ಪೂನಂ ಯಾದವ್ ಇವರ ವಿರುದ್ಧ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಹೂಡಲಾದ ಕ್ರಿಮಿನಲ್ ಪ್ರಕರಣವನ್ನು ತಳ್ಳಿಹಾಕಲಾಗಿದೆ. ಸದರಿ ಕ್ರಿಮಿನಲ್ ಪ್ರಕರಣವು ಪ್ರಸ್ತುತ ಪ್ರಕರಣಕ್ಕೆ ಸಂಬಂಧಿಸಿದ್ದು ಮಾನ್ಯ ಜೆ.ಎಂ.ಎಫ್.ಸಿ. ನ್ಯಾಯಾಲಯವು ಈ ಪ್ರಕರಣವನ್ನು ಕರ್ನಾಟಕ ಅಬಕಾರಿ ಕಾಯಿದೆಯಡಿಯಲ್ಲಿ ಯಾವುದೇ ಅಪರಾಧವಾಗಿಲ್ಲವೆಂಬುದಾಗಿ ಅಭಿಪ್ರಾಯ ವ್ಯಕ್ತಪಡಿಸಲಾಗಿದೆ. ಸದರಿ ಪ್ರಕರಣದಲ್ಲಿ ನ್ಯಾಯಾಲಯವು ವ್ಯಕ್ತಪಡಿಸಿದ ಅಭಿಪ್ರಾಯದ ಆಧಾರದ ಮೇಲೆ ಮುಟ್ಟುಗೋಲು ಪ್ರಕರಣವನ್ನು ಕೈ ಬಿಟ್ಟು, ಸೊತ್ತುಗಳನ್ನು ತಮಗೆ ಬಿಡುಗಡೆ ಮಾಡಬೇಕೆಂದು ವಾಹನ ಮಾಲೀಕರು ಕೇಳಿಕೊಂಡಿರುತ್ತಾರೆ.

ಆದರೆ ಕ್ರಿಮಿನಲ್ ಪ್ರಕರಣದಲ್ಲಿ ಮಾಡಲಾದ ಆದೇಶವು ಮುಟ್ಟುಗೋಲು ಪ್ರಕರಣಕ್ಕೆ ಅನ್ವಯಿಸುವುದಿಲ್ಲ. ಕರ್ನಾಟಕ ಉಚ್ಛ ನ್ಯಾಯಾಲಯ ಆದೇಶ: ಐಎಲ್‌ಆರ್:2002 ಕೆಎಆರ್: ಪುಟ:1375 ರಲ್ಲಿ ನೀಡಿದ ತೀರ್ಪನ್ನು ಪರಿಶೀಲಿಸಲಾಗಿ ಕ್ರಿಮಿನಲ್ ಪ್ರಕರಣದಲ್ಲಿ ಮಾಡಿದ ಆದೇಶವು ಮುಟ್ಟುಗೋಲು ಪ್ರಕರಣಕ್ಕೆ ಅನ್ವಯಿಸುವುದಿಲ್ಲ ಎಂಬುದಾಗಿ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿದೆ. ಅದಲ್ಲದೇ ಮಾನ್ಯ ಸೆಷನ್ ನ್ಯಾಯಾಲಯವು ತಮ್ಮ ಅಭಿಪ್ರಾಯದಲ್ಲಿ ಕರ್ನಾಟಕ ಅಬಕಾರಿ ಕಾಯಿದೆ ಕಲಂ 11 ಉಲ್ಲಂಘನೆಯಾಗಿಲ್ಲವೆಂಬ ವ್ಯಕ್ತ ಪಡಿಸಿರುತ್ತಾರೆ. ಆದರೆ ಈ ಪ್ರಕರಣದಲ್ಲಿ Karnataka Excise (Liquor Transit) Rules 1985ರ ನಿಯಮ 3ರ ಉಲ್ಲಂಘನೆ ಆಗಿರುತ್ತದೆ. ಈ ಕಾರಣದಿಂದ ಮಾನ್ಯ ಸೆಷನ್ ನ್ಯಾಯಾಲಯದ ಆದೇಶವು ಮುಟ್ಟುಗೋಲು ಪ್ರಕರಣಕ್ಕೆ ಅನ್ವಯಿಸುವುದಿಲ್ಲ ಎಂದು ವ್ಯಕ್ತಪಡಿಸಲಾಗಿದೆ.

ಈ ಪ್ರಕರಣದಲ್ಲಿ ಹಾಜರುಪಡಿಸಲಾದ ದಾಖಲಾತಿಗಳನ್ನು ಪರಿಶೀಲಿಸಲಾಗಿ ಪಂಜಾಬು ರಾಜ್ಯದಿಂದ ಕೇರಳ ರಾಜ್ಯಕ್ಕೆ ಕರ್ನಾಟಕದ ಮೂಲಕ ದಿ:10.7.97 ರಂದು ವಾಹನ ಸಂ: ಹೆಚ್‌ಆರ್-47-2874 ನ್ನು ಸಾಗಾಣಿಕೆ ಮಾಡಲು Karnataka Excise (Liquor Transit) Rules 1985 ರಡಿಯಲ್ಲಿ ರಹದಾರಿ ಪತ್ರ ಪಡೆದಿರುವುದಿಲ್ಲ ಎಂಬುವುದು ಸಿದ್ಧಗೊಂಡಿದೆ. ಈ ಪ್ರಕರಣದಲ್ಲಿ ಸದರಿ ರಹದಾರಿ ಪತ್ರವನ್ನು ಪಡೆಯದೇ ಇರುವುದು ಕರ್ನಾಟಕ ಅಬಕಾರಿ ಅಧಿನಿಯಮದಡಿ ಶಿಕ್ಷಾರ್ಹಕ ಅಪರಾಧವಾಗಿರುತ್ತದೆ. ಕರ್ನಾಟಕ ಅಬಕಾರಿ ಅಧಿನಿಯಮ ಕಲಂ 32 ರಡಿಯಲ್ಲಿ ಶಿಕ್ಷಾರ್ಹಕ ಅಪರಾಧವಾಗಿರುವುದು ಸಿದ್ಧಗೊಂಡಿರುತ್ತದೆ. ಈ ಕಾರಣದಿಂದ ಒಂದನೇ ಅಂಶವನ್ನು ಸಕಾರಾತ್ಮಕವಾಗಿ ತೀರ್ಮಾನಿಸಲಾಗಿದೆ.

ಈ ಪ್ರಕರಣದಲ್ಲಿ ವಾಹನ ಮಾಲೀಕರಾದ ಶ್ರೀಮತಿ ಪೂನಂ ಯಾಧವ್ ಇವರು ತಮ್ಮ ವಾಹನದಲ್ಲಿ ಮದ್ಯಸಾರ ಸಾಗಾಣಿಕೆಗೆ ಉಪಯೋಗಿಸುವ ವಿಷಯವನ್ನು ತಮ್ಮ ಅರ್ಜಿಯಲ್ಲಿಯೇ ಒಪ್ಪಿಕೊಂಡಿರುತ್ತಾರೆ. ಅವರು ತಮ್ಮ ಅರ್ಜಿಯಲ್ಲಿ ಮದ್ಯಸಾರ ಸಾಗಾಟ ಮಾಡಲು ಅಗತ್ಯವಾದ ಈ ಕೆಳಕಂಡ ದಾಖಲೆಗಳನ್ನು ಇರುವುದು ಖಚಿತಪಡಿಸಿರುವುದಾಗಿ ನುಡಿದಿರುತ್ತಾರೆ.

1. ಅಸಿಸ್ಟೆಂಟ್ ಎಕ್ಸೈಜ್ ಕಮೀಷನರ್, ಅಲೆಪ್ಪ, ಕೇರಳ ಇವರಿಂದ ನೀಡಲಾಗಿರುವ ಆಮದು ರಹದಾರಿ ಪತ್ರ ಸಂ: 72403/97-98 ದಿ: 24.6.97 ಇದರ ವಾಯಿದೆ ದಿ:18.7.97ರ ವರೆಗೆ ಇರುವುದಾಗಿದೆ.
2. ಪಂಜಾಬು ರಾಜ್ಯದ ಎಕ್ಸೈಜ್ ಹಾಗೂ ತೆರಿಗೆ ಇಲಾಖೆಯಿಂದ ನೀಡಲಾಗಿರುವ ರಫ್ತು (Export) ಪರ್ಮಿಟ್ ಸಂ:67 ದಿ:1.7.97ರ ವಾಯಿದೆ ದಿ:15.7.97ರ ವರೆಗೆ ಹೊಂದಿರುತ್ತದೆ.
3. ಫಾರಂ ಸಂ:ಎಲ್ 38ರಂತೆ ಎಕ್ಸೈಜ್ ಆಫೀಸರ್, ಚಂಢಿಗಡ್ ಡಿಸ್ಟಿಲರೀಸ್, ಬನ್ನೂರು ಇವರು ನೀಡಿರುವ ದಿ:1.7.97ರ ದೃಢಪತ್ರ.
4. ಚಂಢಿಗಡ್ ಡಿಸ್ಟಿಲರಿ, ಬನ್ನೂರು ಇವರು 20,000 ಲೀಟರು ನ್ಯೂಟ್ರಾಲ್ ಸ್ಪಿರಿಟನ್ನು ಸರಕು ಸಾಗಾಣಿಕೆದಾರರಾದ ಮೆ: ಮೆಕ್‌ಡೆವೆಲ್ ಅಂಡ್ ಕಂಪೆನಿ ಕೇರಳ ಇವರಿಗೆ ರಫ್ತು ಮಾಡಲು ನೀಡಲಾಗಿರುವ ಮೌಲ್ಯ ರೂ.3,50,000/- ದ ನಗದು ಬಿಲ್ಲು ಸಂ:102 ದಿ:1.7.97.

ವಾಹನ ಮಾಲೀಕರು ತನ್ನ ವಾಹನ ಟ್ಯಾಂಕರನ್ನು ಪಬ್ಲಿಕ್ ಸಾರಿಗೆಯಲ್ಲಿ ಬಾಡಿಗೆಯ ಮೇರೆಗೆ ಮದ್ಯಸಾರವನ್ನು ಪಂಜಾಬು ಚಂಢಿಗಡ್‌ನಿಂದ ಚೀರ್ತಳ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡಲು ಮೆ: ಮೆಕ್‌ಡೆವೆಲ್ ಅಂಡ್ ಕಂಪೆನಿ ಇವರಿಗೆ ನೀಡಲು ಒಪ್ಪಿದ್ದು, ಈ ಬಗ್ಗೆ ಅಗತ್ಯ ಹೊಂದಬೇಕಾದ ಕಾನೂನು ರೀತಿಯ ದಾಖಲೆಗಳನ್ನು ಹೊಂದಿರುವ ಬಗ್ಗೆ ತಾನು ನಿಗಾ ವಹಿಸಬೇಕಾಗಿದ್ದ ಜವಾಬ್ದಾರಿಯನ್ನು ನಿರ್ವಹಿಸುವುದು ಸ್ಪಷ್ಟವಾಗಿರುತ್ತದೆ. ಸದ್ರಿ ಸರಕನ್ನು ಕರ್ನಾಟಕ ರಾಜ್ಯದ ಮೂಲಕ ಸಾಗಾಣಿಕೆ ಮಾಡುವ ಸಂದರ್ಭದಲ್ಲಿ ಮದ್ಯಸಾರ ಸರಕು ಸಾಗಾಣಿಕೆ ಮಾಡುತ್ತಿರುವ ಸರಕಿನ ಮಾಲೀಕರಾದ ಮೆ: ಮೆಕ್‌ಡೆವೆಲ್ ಅಂಡ್ ಕಂಪೆನಿ ಇವರು ಪಡೆದುಕೊಳ್ಳಬೇಕಾಗಿದ್ದು, ವಾಹನ ಮಾಲೀಕರ ಹೊಣೆ ಇರುವುದಿಲ್ಲವೆಂದು ತೀರ್ಮಾನಕ್ಕೆ ಬರಬಹುದಾಗಿರುವುದರಿಂದ 3ನೇ ವಿವಿಧಾಂಶವನ್ನು ಸಕರಾತ್ಮವಾಗಿ ತೀರ್ಮಾನಿಸಿದೆ.

20,000 ಲೀಟರು ಮದ್ಯಸಾರದ ಸರಕನ್ನು ಪಂಜಾಬು ರಾಜ್ಯದಿಂದ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡಲು ಕೇರಳ ರಾಜ್ಯದ ಆಮದು ರಹದಾರಿ ಪತ್ರ ಸಂ: 72403/97-98 ದಿ:24.6.97ನ್ನು ಹಾಗೂ ಪಂಜಾಬು ರಾಜ್ಯದಿಂದ ಪಡೆಯಲಾಗಿರುವ ರಫ್ತು ರಹದಾರಿ ಪತ್ರ ಸಂ: 67 ದಿ:1.7.97ನ್ನು ಪಡೆದು ಸದರಿ ಮದ್ಯಸಾರದ ಸರಕನ್ನು ಪಂಜಾಬು ರಾಜ್ಯದಿಂದ ಕೇರಳ ರಾಜ್ಯಕ್ಕೆ ಸಾಗಾಣಿಕೆ ಮಾಡುವ ಸಂದರ್ಭದಲ್ಲಿ ಕರ್ನಾಟಕ ರಾಜ್ಯದ ಮೂಲಕ ಸಾಗಿ ಹೋಗಬೇಕಾದ ವಿಷಯ ಸಾಗಾಣಿಕೆದಾರರಾದ ಮೆ: ಮೆಕ್‌ಡೆವೆಲ್ ಅಂಡ್ ಕಂಪೆನಿ ಇವರಿಗೆ ತಿಳಿದ ವಿಷಯವಾಗಿದ್ದು ಅವರು ಈ ಕುರಿತು Karnataka Excise (Liqour Transit) Rules 1985ರ ನಿಯಮ 3ರನ್ನು ಪರಿಶೀಲಿಸಲಾಗಿ ಕರ್ನಾಟಕ ಮುಖಾಂತರ ಬೇರೆ ರಾಜ್ಯಗಳಿಗೆ 'Liqour' ನ್ನು ಸಾಗಾಟ ಮಾಡಲು ಸದರಿ ನಿಯಮದಡಿ ರಹದಾರಿ ಪತ್ರವನ್ನು ಪಡೆಯುವುದು ಅವಶ್ಯವಿರುತ್ತದೆ. 'Liqour' ಎಂಬುದಕ್ಕೆ ಅರ್ಥವಿವರಣೆಯನ್ನು ಕರ್ನಾಟಕ ಅಬಕಾರಿ ಅಧಿನಿಯಮ ಕಲಂನ್ನು ಪರಿಶೀಲಿಸಲಾಗಿ ಮದ್ಯಸಾರವು ಸಹಾ Liqour ಎಂಬುದಾಗಿರುತ್ತದೆ. ಈ ಕಾರಣದಿಂದ ಸದರಿ 20,000 ಲೀಟರು ಮದ್ಯಸಾರವನ್ನು ದಿ:10.7.97 ರಂದು Karnataka Excise (Liqour Transit) Rules 1985ರ ಅಡಿ ಅಕ್ರಮವಾಗಿ ಸಾಗಿಸಲಾಗಿರುವುದು ಸಾಭೀತಾಗಿರುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ಹಾಗೂ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳ ಸಾಕ್ಷಿಯ ಆಧಾರಗಳನ್ನು ಹಾಗೂ ಫಿರ್ಯಾದುದಾರರ ಸಾಕ್ಷಿ ವಿಚಾರಣೆ ಮಾಹಿತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾಗಿರುವ 20,000/- ಲೀಟರು ನ್ಯೂಟ್ರಾಲ್ ಸ್ಪಿರಿಟನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಹುದಾಗಿಯೂ ಹಾಗೂ ವಾಹನ ಮಾಲೀಕರು ತನ್ನ ಸಾರ್ವಜನಿಕ ಸಾರಿಗೆ ಒಳಪಟ್ಟು ವಾಹನವನ್ನು ಅಗತ್ಯವಿದ್ದ ಆಮದು ರಹದಾರಿ ಪತ್ರ, ರಫ್ತು ರಹದಾರಿ ಪತ್ರ, ಮಾರಾಟದ ನಗದು ಬಿಲ್ಲುಗಳನ್ನು ಒಳಗೊಂಡ ದಾಖಲೆಗಳನ್ನು ಪಡೆದು ಬಾಡಿಗೆಯ ಮೇರೆಗೆ ವಾಹನದಲ್ಲಿ ನ್ಯೂಟ್ರಾಲ್ ಸ್ಪಿರಿಟನ್ನು ಪಂಜಾಬು ರಾಜ್ಯದಿಂದ ಕೇರಳ ರಾಜ್ಯಕ್ಕೆ ಬಾಡಿಗೆ ಮೇರೆಗೆ ಚಾಲಕನ್ನು ನೀಡಿದ್ದು, ಕರ್ನಾಟಕ ಅಬಕಾರಿ (ಲಿಕ್ಕರ್ ಟ್ರಾನ್ಸಿಟ್) ನಿಯಮ 1985 ರಡಿಯಲ್ಲಿ ಕರ್ನಾಟಕ ರಾಜ್ಯದ ಮೂಲಕ ಸರಕನ್ನು ಸಾಗಾಣಿಕೆ ಮಾಡಲು, ಸರಕು ಸಾಗಾಣಿಕೆದಾರರು ರಹದಾರಿ ಪಡೆದುಕೊಳ್ಳತಕ್ಕ ಜವಾಬ್ದಾರಿಯಾಗಿದ್ದು, ವಾಹನ ಮಾಲೀಕರ ಹೊಣೆ ಇಲ್ಲದಿರುವ ಕಾರಣ ವಾಹನವನ್ನು ಮುಟ್ಟುಗೋಲು ಮಾಡಲು ಯಾವುದೇ ನ್ಯಾಯಬದ್ಧ ಕಾರಣವಿಲ್ಲದಿರುವ ಕಾರಣದಿಂದ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ: ಎಸ್‌ಡಿಕೆ/14/ಡಿಟಿಸಿಆರ್/97-98, ದಿನಾಂಕ: 31ನೇ ಮಾರ್ಚ್ 2005**

ಎನ್.ಎಂ. ಹುಸೇನ್ ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು ಆದ ನಾನು ಕರ್ನಾಟಕ ಅಬಕಾರಿ ಅಧಿನಿಯಮ 1965ನೇ ಕಲಂ 43(ಎ) ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ನಿಯಮ 43 (ಬಿ) ಯಲ್ಲಿ ಅನುಸರಿಸಬೇಕಾದ ಕ್ರಮಗಳನ್ನು ಜರುಗಿಸಿದ ನಂತರ, ಅಬಕಾರಿ ನಿರೀಕ್ಷಕರು, ಸುರತ್ಕಲ್ ಉಪ ವಿಭಾಗ, ಸುರತ್ಕಲ್ ಇವರ ಮೊಕದ್ದಮೆ ಸಂಖ್ಯೆ: 1/97-98 ದಿನಾಂಕ:10.7.97 ರಲ್ಲಿ ವಶಪಡಿಸಿಕೊಳ್ಳಲಾಗಿರುವ 20,000 ಲೀಟರು ನ್ಯೂಟ್ರಾಲ್ ಸ್ಪಿರಿಟನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಆದೇಶ ಹೊರಡಿಸಿರುತ್ತೇನೆ.

ಸದರಿ ಪ್ರಕರಣದಲ್ಲಿ ವಶಪಡಿಸಿಕೊಳ್ಳಲಾಗಿರುವ ಟ್ಯಾಂಕರ್ ನೊಂದಣಿ ಸಂ: ಹೆಚ್‌ಆರ್-47-2874 ನ್ನು ಈ ಪ್ರಾಧಿಕಾರದ ಮದ್ಯಂತರ ಆದೇಶ ಸಮ ಸಂಖ್ಯೆ ದಿ:14.7.97 ರಲ್ಲಿ ಆರ್.ಸಿ. ಮಾಲೀಕರ ವಶಕ್ಕೆ ತಾತ್ಕಾಲಿಕ ನೆಲೆಯಲ್ಲಿ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದ್ದು, ಸದರಿ ವಾಹನವು ಮದ್ಯಸಾರದ ಸರಕನ್ನು ಪಂಜಾಬು ರಾಜ್ಯದಿಂದ ಕೇರಳ ರಾಜ್ಯಕ್ಕೆ ಮೆ: ಮೆಕ್‌ಡೆವಲ್ ಅಂಡ್ ಕಂಪೆನಿ, ಚೇರ್ತಳ ಇಲ್ಲಿಗೆ ಸಾಗಾಣಿಕೆ ಬಗ್ಗೆ ಬಾಡಿಗೆಯ ಮೇರೆಗೆ ನೀಡಿದ್ದು, ಆರ್.ಸಿ. ಮಾಲೀಕರು ಸದರಿ ಸರಕಿನ ಬಗ್ಗೆ ಅಗತ್ಯ ದಾಖಲೆಗಳನ್ನು ಸರಕು ರವಾನಿಸುವ ಪೂರ್ವದಲ್ಲಿ ಪರಿಶೀಲಿಸಿಕೊಂಡಿದ್ದು, ಸರಕು ಸಾಗಾಣಿಕೆದಾರರು ಸದರಿ ಮದ್ಯಸಾರದ ಸರಕನ್ನು ಕರ್ನಾಟಕ ರಾಜ್ಯದ ಮೂಲಕ ಸಾಗಿಸಲು ಕರ್ನಾಟಕ ಅಬಕಾರಿ ಟ್ರಾನ್ಸಿಟ್ ಪರ್ಮಿಟ್ ನಿಯಮಗಳು 1985 ರಂತೆ ರಹದಾರಿಪಡೆದುಕೊಳ್ಳತಕ್ಕದಾಗಿದ್ದು, ಆರ್.ಸಿ. ಮಾಲೀಕರ ಹೊಣೆ ಆಗಿಲ್ಲದಿರುವ ಕಾರಣ ಅವರ ವಾಹನ ಸಂ: ಹೆಚ್‌ಆರ್-47-2874 ನ್ನು ಮುಟ್ಟುಗೋಲುಗೊಳಿಸದೇ ಅವರ ಪರವಾಗಿ ಬಿಡುಗಡೆಗೊಳಿಸಿ, ತಾತ್ಕಾಲಿಕ ಬಿಡುಗಡೆ ಆದೇಶವನ್ನು ಖಿಲಾಸೆಗೊಳಿಸಿದೆ.

ಮುಟ್ಟುಗೋಲು ಹಾಕಿಕೊಂಡಿರುವ 20,000 ಲೀಟರು ಮದ್ಯಸಾರದ ಒಟ್ಟು ಮೌಲ್ಯ ರೂ. 5,20,000/-ವನ್ನು ಸರ್ಕಾರದಲ್ಲಿ ಸಿವಿಲ್ ಡಿಪೋಸಿಟ್ ಲೆಕ್ಕ ಶೀರ್ಷಿಕೆ ಕೋಡ್ ಸಂ:8443-00-103-001 ಸೆಕ್ಯೂರಿಟಿ ಡಿಪೋಸಿಟ್‌ನಲ್ಲಿ ಚಲನ್ ನಂ: 28 ದಿ. 22.8.97 ರಂತೆ ಇಟ್ಟಿರುವ ಮೊಬಲಗನ್ನು ಸರ್ಕಾರಕ್ಕೆ ಕರ್ನಾಟಕ ಅಬಕಾರಿ ಲೆಕ್ಕ ಶೀರ್ಷಿಕೆ ಕೋಡ್ ಸಂ:0039-00-150-000 ದಂಡ ಮತ್ತು ಮುಟ್ಟುಗೋಲು ಲೆಕ್ಕಕ್ಕೆ ಹೊಂದಾಣಿಕೆ ಮಾಡಿಕೊಳ್ಳಲು ಆದೇಶಿಸಿದೆ.

ಈ ಆದೇಶವನ್ನು ಇಂದು ಅಂದರೆ ದಿ: 31.3.2005 ರಂದು ಶೀಘ್ರಲಿಪಿಗಾರರಿಗೆ ಉತ್ತಲೇಖನ ಕೊಟ್ಟು, ಬೆರಳಚ್ಚು ಮಾಡಿಸಿ ಕಂಪ್ಯೂಟರಿನಲ್ಲಿ ಮುದ್ರಿಸಿ ಪ್ರತಿಯನ್ನು ತಿದ್ದಿ ಮುಕ್ತ ನ್ಯಾಯಾಲಯದಲ್ಲಿ ಘೋಷಿಸಲಾಯಿತು.

**ಎನ್.ಎಂ. ಹುಸೇನ್**
ಅಧಿಕೃತ ಅಧಿಕಾರಿಗಳು ಹಾಗೂ ಅಬಕಾರಿ ಅಧೀಕ್ಷಕರು, ದ.ಕ.ಜಿಲ್ಲೆ, ಮಂಗಳೂರು.

ಪಿ.ಆರ್. 632

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿ (ನಿಯಮ 441ರಡಿಯಲ್ಲಿ)**

**ವೈಶ್ಯ ಕೋ-ಅಪರೇಟಿವ್ ಬ್ಯಾಂಕ್ ಲಿ., ತುಮಕೂರು ಇವರ ನಡವಳಿಗಳು**

**ವಿಷಯ:** ಸಿಇಪಿ ನಂ.31/2003-04 ಮೆ: ಕೆ.ಜಿ.ವೈ.ಸ್ಟಾರ್ಚ್ ಎಕ್ಸ್‌ಪೋರ್ಟ್ಸ್, ಮಧುಗಿರಿ ರಸ್ತೆ, ವೆಂಕಟೇಶಪುರ, ತುಮಕೂರು., ಇವರ ಸ್ಥಿರಾಸ್ತಿ ಹರಾಜು ಬಗ್ಗೆ ಮಾರಾಟ ಸ್ಥಿರೀಕರಣಗೊಳಿಸುವುದು.

**ಉಲ್ಲೇಖ:** ಮಾರಾಟಾಧಿಕಾರಿ / ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ವೈಶ್ಯ ಕೋ-ಅಪರೇಟಿವ್ ಬ್ಯಾಂಕ್ ಲಿ., ತುಮಕೂರು ಇವರ ಪತ್ರ ಸಂಖ್ಯೆ: ವೈಶ್ಯ ಕೋ-ಬ್ಯಾಂಕ್ ಹರಾಜು 14917/2003-04 ದಿ: 24.3.05.

ಮೆ: ಕೆ.ಜಿ.ವೈ. ಸ್ಟಾರ್ಚ್ ಎಕ್ಸ್‌ಪೋರ್ಟ್, ಮಧುಗಿರಿ ರಸ್ತೆ, ವೆಂಕಟೇಶಪುರ, ತುಮಕೂರು., ಇವರು ವೈಶ್ಯ ಕೋ-ಅಪರೇಟಿವ್ ಬ್ಯಾಂಕ್ ಲಿ., ತುಮಕೂರು ಇವರಲ್ಲಿ ರೂ.12.00 ಲಕ್ಷಗಳ ಸಾಲ ಪಡೆದಿದ್ದು, ಸಾಲ ಮರುಪಾವತಿಸುವಲ್ಲಿ ವಿಫಲರಾದ ಪ್ರಯುಕ್ತ ಸಹಕಾರಿ ಕಾಯಿದೆ ಕಲಂ 70ರಡಿಯಲ್ಲಿ ದಾವೆ ಹೂಡಿ ದಿನಾಂಕ: 29.12.2003 ರಂದು ರೂ.15,85,559-00 ಗಳು ಮತ್ತು ಶೇ. $16^1/_2$+2 ಬಡ್ಡಿ ಸಮೇತ ಸಾಲ ವಸೂಲಿ ಮಾಡಿಕೊಳ್ಳಲು ಡಿಕ್ರಿ ಆದೇಶ ಪಡೆಯಲಾಗಿ, ಈ ಆದೇಶವನ್ನು ಜಾರಿಗೊಳಿಸುವ ಸಲುವಾಗಿ ಅಮಲ್ಜಾರಿ ನಂ.31/2003-04 ರಲ್ಲಿ ಅಮಲ್ಜಾರಿ ಜಡ್ತಿ ಆದೇಶ ಪಡೆದಿರುತ್ತದೆ. ಡಿಕ್ರಿದಾರ ಬ್ಯಾಂಕಿನ ಮಾರಾಟಾಧಿಕಾರಿಗಳು ಸಾಲಗಾರರು ಬ್ಯಾಂಕಿಗೆ ಆಧಾರ ಮಾಡಿರುವ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 13.8.2004 ರಂದು ಬಹಿರಂಗ ಹರಾಜು ನಡೆಸಿರುತ್ತಾರೆ. ಹರಾಜಿನಲ್ಲಿ ಶ್ರೀಮತಿ ಕೆ.ಎಸ್. ಅನ್ನಪೂರ್ಣ ಕೋಂ ಕೆ.ವೈ. ಶಿವಣ್ಣ, ವಾಲ್ಮೀಕಿ ನಗರ, ತುಮಕೂರು ಇವರು ಷೆಡ್ಯೂಲ್ ಸ್ಥಿರಾಸ್ತಿಯನ್ನು ರೂ.10.60 ಲಕ್ಷಗಳಿಗೆ ಖರೀದಿಸಿರುತ್ತಾರೆ. ಬಿಡ್‌ದಾರರು ಬಿಡ್ ಮೊತ್ತವನ್ನು ಡಿಕ್ರಿದಾರ ಬ್ಯಾಂಕಿಗೆ ಪೂರ್ಣ ಪಾವತಿ ಮಾಡಿರುತ್ತಾರೆ. ಬ್ಯಾಂಕಿನ ಮಾರಾಟಾಧಿಕಾರಿಗಳು / ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಉಲ್ಲೇಖಿತ ಪತ್ರದಲ್ಲಿ ಸದರಿ ಮಾರಾಟವನ್ನು ಸ್ಥಿರೀಕರಣಗೊಳಿಸಿ ದೃಢೀಕರಣ ನೀಡಲು ಪ್ರಸ್ತಾವನೆ ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, ಸಾಲಗಾರರಿಗೆ ಅಂತಿಮವಾಗಿ ಹೇಳಿಕೆ ನೀಡಲು ಕಾಲಾವಕಾಶ ನೀಡಿ ದಿನಾಂಕ: 16.8.2004 ರಂದು ತಿಳುವಳಿಕೆ ನೀಡಿರುತ್ತಾರೆ. ಈ ಬಗ್ಗೆ ಸಾಲಗಾರರಿಂದ ಯಾವುದೇ ಹೇಳಿಕೆ ವಿವರಣೆ ಬಾರದೇ ಇರುವುದರಿಂದ ಹಾಗೂ ಸಾಲ ತೀರುವಳಿ ಮಾಡಲು ವಿಫಲರಾಗಿರುವುದನ್ನು ಪರಿಗಣಿಸಿದ್ದು, ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 13.8.2004 ರಂದು ಬಹಿರಂಗ ಹರಾಜು ನಡೆಸಿರುವುದನ್ನು ಮಾರಾಟ ಸ್ಥಿರೀಕರಣಗೊಳಿಸುವುದರ ವಿನಹ ಬೇರೆ ಮಾರ್ಗ ಇರುವುದಿಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದು, ಶ್ರೀಮತಿ ಕೆ.ಎಸ್. ಅನ್ನಪೂರ್ಣ ಕೋಂ ಕೆ.ವೈ. ಶಿವಣ್ಣ, ತುಮಕೂರು ಇವರಿಗೆ ಷೆಡ್ಯೂಲ್ ಸ್ಥಿರಾಸ್ತಿಯನ್ನು ರೂ.10.60 ಲಕ್ಷಗಳಿಗೆ ಮಾರಾಟವಾಗಿರುವುದನ್ನು ಸ್ಥಿರೀಕರಣಗೊಳಿಸಿ ಈ ಕೆಳಕಂಡಂತೆ ಆದೇಶ ನೀಡಿರುತ್ತೇನೆ.

**ಆದೇಶ**

**ಸಂಖ್ಯೆ: ಸನಿ (ವಅ - ನಿ441) ವೈಕೋ.ಬ್ಯಾಂಕ್ : 03/2004-05, ದಿನಾಂಕ: 28ನೇ ಮಾರ್ಚ್ 2005**

ಎಸ್.ಬಿ. ಮಲ್ಲಪ್ಪ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಿ ಅಧಿಕಾರಿ (ನಿಯಮ 441) ವೈಶ್ಯ ಕೋ-ಅಪರೇಟಿವ್ ಬ್ಯಾಂಕ್ ಲಿ., ತುಮಕೂರು., ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(7) ರನ್ವಯ ದತ್ತವಾದ ಮತ್ತು ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ 69:ಸಿಎಲ್‌ಎಂ : 2000, ದಿನಾಂಕ: 21.11.2001ರನ್ವಯ ಪ್ರತ್ಯಾಯೋಜಿಸಲ್ಪಟ್ಟ ಅಧಿಕಾರವನ್ನು ಚಲಾಯಿಸಿ ಈ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಮೆ : ಕೆ.ಜಿ.ವೈ. ಸ್ಟಾರ್ಚ್ ಎಕ್ಸ್‌ಪೋರ್ಟ್ಸ್, ಮಧುಗಿರಿ ರಸ್ತೆ, ವೆಂಕಟೇಶಪುರ, ತುಮಕೂರು ಇವರ ಈ ಕೆಳಕಂಡ ಸ್ಥಿರಾಸ್ತಿಯನ್ನು ದಿನಾಂಕ: 13.8.2004 ರಂದು ನಡೆದ ಬಹಿರಂಗ ಹರಾಜಿನಲ್ಲಿ ಶ್ರೀಮತಿ ಅನ್ನಪೂರ್ಣ ಕೋಂ ಕೆ.ವೈ. ಶಿವಣ್ಣ, ವಾಲ್ಮೀಕಿನಗರ, ತುಮಕೂರು ಇವರು ರೂ.10.60 ಲಕ್ಷ (ಹತ್ತು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಖರೀದಿಸಿರುವುದನ್ನು ಒಪ್ಪಿ ಈ ಮೂಲಕ ಮಾರಾಟ ಸ್ಥಿರೀಕರಣ ಆದೇಶ ನೀಡಿರುತ್ತೇನೆ. ಮಾರಾಟದ ಮೊತ್ತವನ್ನು ಸಾಲಗಾರರ ಸಾಲದ ಖಾತೆಗೆ ವರ್ಗಾಯಿಸಿಕೊಳ್ಳತಕ್ಕದ್ದು.

**ಷೆಡ್ಯೂಲ್ ಸ್ವತ್ತಿನ ವಿವರ**

| | | |
|---|---|---|
| ನಗರ | : | ತುಮಕೂರು ಟೌನ್ |
| ವಾರ್ಡ್ ನಂ. | : | 24 |
| ಬಡಾವಣೆ | : | 3ನೇ ಅಡ್ಡರಸ್ತೆ, ಸೋಮೇಶ್ವರ ಬಡಾವಣೆ, ತುಮಕೂರು-572 103. |
| ಮುನಿಸಿಪಲ್ ಖಾತಾ ನಂ. ಹಾಗೂ ವಿಸ್ತೀರ್ಣ | : | (1) ಹಳೇ ಖಾತಾ ನಂ. 2675/1877 ಹಾಲಿ ಖಾತಾ ನಂ. 350/407<br>ಪೂರ್ವ - ಪಶ್ಚಿಮ : 112 ಅಡಿಗಳು<br>ಉತ್ತರ - ದಕ್ಷಿಣ : 27 ಅಡಿಗಳು<br>(2) ಹಳೇ ಖಾತಾ ನಂ. 1877/2675 ಹಾಲಿ ಖಾತಾ ನಂ. 351/408<br>ಪೂರ್ವ - ಪಶ್ಚಿಮ : 112 ಅಡಿಗಳು<br>ಉತ್ತರ - ದಕ್ಷಿಣ : 27 ಅಡಿಗಳು |

**ಶ್ರೀಮತಿ ಕೆ.ಎಸ್. ದಾಕ್ಷಾಯಿಣಿರವರ ಹೆಸರಿನಲ್ಲಿರುವ ನಿವೇಶನಕ್ಕೆ ಚಕ್ಕುಬಂದಿ:**

**(ಮುನಿಸಿಪಲ್ ಖಾತಾ ಸಂಖ್ಯೆ: 2675/1877, ಹಾಲಿ ಖಾತಾ ನಂ. 350/407)**

ಪೂರ್ವ - ಪಶ್ಚಿಮ : 112 ಅಡಿಗಳು
ಉತ್ತರ - ದಕ್ಷಿಣ : 27 ಅಡಿಗಳು

ಪೂರ್ವಕ್ಕೆ : ರಸ್ತೆ
ಪಶ್ಚಿಮಕ್ಕೆ : ಕನ್ಸರ್‌ವೆನ್ಸಿ
ಉತ್ತರಕ್ಕೆ : ಶ್ರೀ ಗುರುರಾಜರಾವ್‌ರವರ ಮನೆ
ದಕ್ಷಿಣಕ್ಕೆ : ಶ್ರೀಮತಿ ಕೆ.ಎಸ್. ಭಾರತಿರವರ ಸ್ವತ್ತು

**ಶ್ರೀಮತಿ ಕೆ.ಎಸ್. ಭಾರತಿರವರ ಹೆಸರಿನಲ್ಲಿರುವ ನಿವೇಶನಕ್ಕೆ ಚಕ್ಕುಬಂದಿ:**

**(ಮುನಿಸಿಪಲ್ ಖಾತಾ ಸಂಖ್ಯೆ: 1877/2675, ಹಾಲಿ ಖಾತಾ ನಂ. 351/408)**

ಪೂರ್ವ - ಪಶ್ಚಿಮ : 112 ಅಡಿಗಳು
ಉತ್ತರ - ದಕ್ಷಿಣ : 27 ಅಡಿಗಳು

ಪೂರ್ವಕ್ಕೆ : ರಸ್ತೆ
ಪಶ್ಚಿಮಕ್ಕೆ : ಕನ್ಸರ್‌ವೆನ್ಸಿ
ಉತ್ತರಕ್ಕೆ : ಶ್ರೀಮತಿ ಕೆ.ಎಸ್. ದಾಕ್ಷಾಯಿಣಿರವರ ಸ್ವತ್ತು
ದಕ್ಷಿಣಕ್ಕೆ : ಶ್ರೀಮತಿ ಪ್ರೇಮಾ ಕುಮಾರಿರವರ ಸ್ವತ್ತು

ಈ ಎರಡು ಸ್ಥಿರಾಸ್ತಿಗಳು ಅಕ್ಕಪಕ್ಕದ ಖಾಲಿ ನಿವೇಶನಗಳಾಗಿದ್ದು, ಇದರ ಒಟ್ಟು ಅಳತೆ ಪೂರ್ವ-ಪಶ್ಚಿಮ: 112 ಅಡಿಗಳು ಮತ್ತು ಉತ್ತರ - ದಕ್ಷಿಣ : 54 ಅಡಿಗಳ ವಿಸ್ತೀರ್ಣವುಳ್ಳ ಈ ಜಾಗಕ್ಕೆ ಚಕ್ಕುಬಂದಿ

ಪೂರ್ವಕ್ಕೆ : ರಸ್ತೆ
ಪಶ್ಚಿಮಕ್ಕೆ : ಕನ್ಸರ್‌ವೆನ್ಸಿ
ಉತ್ತರಕ್ಕೆ : ಶ್ರೀ ಗುರುರಾಜರಾವ್‌ರವರ ಮನೆ
ದಕ್ಷಿಣಕ್ಕೆ : ಶ್ರೀಮತಿ ಪ್ರೇಮಾ ಕುಮಾರಿರವರ ಸ್ವತ್ತು

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ: 28.3.2005 ರಂದು ನನ್ನ ಹಸ್ತಾಕ್ಷರಗಳಲ್ಲಿ ಕಛೇರಿ ಮುದ್ರೆಯೊಂದಿಗೆ ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿ (ನಿಯಮ 441)
ವೈಶ್ಯ ಕೋ-ಅಪರೇಟಿವ್ ಬ್ಯಾಂಕ್ ಲಿ., ತುಮಕೂರು.

**ಹರಾಜು ಕ್ರಯಪತ್ರ**

**(ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38(7)ರ ಅಡಿಯಲ್ಲಿ)**

| | | |
|---|---|---|
| ದಿನಾಂಕ | : | 28.3.2005 |
| ಹರಾಜು ಕ್ರಮದ ಮೌಲ್ಯ | : | ರೂ.10,60,000-00 (ಹತ್ತು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) |
| ಸ್ವತ್ತು ಇರುವ ಸ್ಥಳ | : | ವಾರ್ಡ್ ನಂ.24, 3ನೇ ಅಡ್ಡರಸ್ತೆ, ಸೋಮೇಶ್ವರ ಬಡಾವಣೆ, ತುಮಕೂರು ಟೌನ್. |
| ಹರಾಜಿನಲ್ಲಿ ಅಂತಿಮ ಬಿಡ್ಡುದಾರರು | : | ಶ್ರೀಮತಿ ಕೆ.ಎಸ್. ಅನ್ನಪೂರ್ಣ (63 ವರ್ಷಗಳು) ಕೋಂ ಕೆ.ವೈ. ಶಿವಣ್ಣ, ವಾಲ್ಮೀಕಿ ನಗರ, ತುಮಕೂರು. |
| ಸ್ವತ್ತನ್ನು ಹರಾಜು ಮಾಡಿದವರು | : | ಮಾರಾಟಾಧಿಕಾರಿ ವೈಶ್ಯ ಕೋ-ಅಪರೇಟಿವ್ ಬ್ಯಾಂಕ್ ಲಿ., ವಿವೇಕಾನಂದ ರಸ್ತೆ, ತುಮಕೂರು. |

ಮೆ: ಕೆ.ಜಿ.ವೈ. ಸ್ಟಾರ್ಚ್ ಎಕ್ಸ್‌ಪೋರ್ಟ್ಸ್, ಮಧುಗಿರಿ ರಸ್ತೆ, ವೆಂಕಟೇಶಪುರ, ತುಮಕೂರು ಇವರು ವೈಶ್ಯ ಕೋ-ಅಪರೇಟಿವ್ ಬ್ಯಾಂಕ್ ಲಿ., ವಿವೇಕಾನಂದ ರಸ್ತೆ, ತುಮಕೂರು ಈ ಬ್ಯಾಂಕಿನಲ್ಲಿ ರೂ.12,00,000-00 (ಹನ್ನೆರಡು ಲಕ್ಷ ರೂಪಾಯಿಗಳು ಮಾತ್ರ) ಸಾಲ ಪಡೆದು ಸದರಿ ಬ್ಯಾಂಕಿಗೆ ಮರುಪಾವತಿ ಮಾಡದಿರುವ ಪ್ರಯುಕ್ತ ಸಾಲಗಾರರ ವಿರುದ್ಧ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 70ರಡಿಯಲ್ಲಿ ಕರ್ನಾಟಕ ರಾಜ್ಯ, ಸಹಕಾರ ಸಂಘಗಳ ನಿಬಂಧಕರು, ನಂ.1, ಅಲಿಆಸ್ಕರ್ ರಸ್ತೆ, ಬೆಂಗಳೂರು ಇವರ ನ್ಯಾಯಾಲಯದಲ್ಲಿ ದಾವೆ ಕ್ರಮ ಜರುಗಿಸಿದ್ದು, ದಾವೆ ಸಂಖ್ಯೆ: ಎ(ಐ ಅಂಡ್ ಎಂ) ಡಿ-2 : 3013/2003-04 ರಲ್ಲಿ ರೂ.15,85,559-00 ಮತ್ತು ಶೇ. 16.5ರಂತೆ ಬಡ್ಡಿ ಹಾಗೂ ಶೇ. 2 ರಂತೆ ಸುಸ್ತಿ ಬಡ್ಡಿ ವಸೂಲಾತಿ ಕುರಿತು ದಿನಾಂಕ: 29.12.2003 ರಂದು ಡಿಕ್ರಿ ಆದೇಶ ಪಡೆದಿರುತ್ತದೆ. ಈ ಡಿಕ್ರಿಯನ್ನು ಜಾರಿಗೊಳಿಸುವ ಸಲುವಾಗಿ ಅಮಲ್ಜಾರಿ ಸಂಖ್ಯೆ: 31/2003-04 ರಲ್ಲಿ ಅಮಲ್ಜಾರಿ ಆದೇಶ ಪಡೆದು ಅದರಂತೆ ಸಾಲಗಾರ ಸಂಸ್ಥೆಯ ಪಾಲುದಾರರಾದ ಕೆ.ಎಸ್. ದಾಕ್ಷಾಯಿಣಿ ಬಿನ್ ಕೆ.ವೈ. ಸಿದ್ದಲಿಂಗ ಮೂರ್ತಿ,

ವೆಂಕಟೇಶಪುರ, ಮಧುಗಿರಿ ರಸ್ತೆ, ತುಮಕೂರು ಹಾಗೂ ಕೆ.ಎಸ್. ಭಾರತಿ ಬಿನ್ ಕೆ.ವೈ. ಸಿದ್ದಲಿಂಗ ಮೂರ್ತಿ, ವೆಂಕಟೇಶಪುರ, ಮಧುಗಿರಿ ರಸ್ತೆ, ತುಮಕೂರು ಇವರುಗಳ ಷೆಡ್ಯೂಲ್ ಸ್ಥಿರಾಸ್ತಿಯನ್ನು ದಿನಾಂಕ: 27.5.2004 ರಂದು ಬಹಿರಂಗ ಹರಾಜು ನಡೆಸಲಾಗಿ ಬಿಡ್ ಮೊತ್ತವನ್ನು ಸಕಾಲದಲ್ಲಿ ಪಾವತಿಸದೇ ಇದ್ದ ಪ್ರಯುಕ್ತ ದಿನಾಂಕ: 13.8.2004 ರಂದು ಬ್ಯಾಂಕಿನ ಮಾರಾಟಾಧಿಕಾರಿಗಳು ನಡೆಸಿದ ಅಂತಿಮ ಹರಾಜಿನಲ್ಲಿ ಶ್ರೀಮತಿ ಕೆ.ಎಸ್. ಅನ್ನಪೂರ್ಣ ಕೋಂ ಕೆ.ವೈ. ಶಿವಣ್ಣ ಇವರ ಹೆಸರಿಗೆ ಮೊತ್ತ ರೂ.10,60,000-00 (ಹತ್ತು ಲಕ್ಷದ ಅರವತ್ತು ರೂಪಾಯಿಗಳು ಮಾತ್ರ) ಗಳಿಗೆ ಹರಾಜನ್ನು ಅಂತಿಮವಾಗಿ ಬಿಡ್ ನಿಲ್ಲಿಸಿರುವುದರಿಂದ ಇವರಿಗೆ ಮಾರಾಟ ಮಾಡಲಾಗಿದೆ.

**ಷರತ್ತುಗಳು:** (1) ಮಾರಾಟದಿಂದ ಬಂದ ಹಣ ರೂ.10.60 ಲಕ್ಷಗಳನ್ನು ಡಿಕ್ರಿದಾರ ಬ್ಯಾಂಕಿಗೆ ಮೆ: ಕೆ.ಜಿ.ವೈ. ಸ್ಟಾರ್ಚ್ ಎಕ್ಸ್‌ಪೋರ್ಟ್, ಮಧುಗಿರಿ ರಸ್ತೆ, ವೆಂಕಟೇಶಪುರ, ತುಮಕೂರು ಇವರ ಸಾಲದ ಖಾತೆಗೆ ವರ್ಗಾಯಿಸುವುದು.

(2) ಹರಾಜಿನಲ್ಲಿ ಸ್ವತ್ತನ್ನು ಪಡೆದವರು ಈ ದಿನದಿಂದಲೇ ತಮ್ಮ ಸ್ವಾಧೀನಕ್ಕೆ ಪಡೆದು ಅನುಭೋಗಿಸಿಕೊಂಡು ಹೋಗುವುದು.

(3) ಮುಂದೆ ಷೆಡ್ಯೂಲ್ ಸ್ವತ್ತನ್ನು ಮಾರಾಟ ಮಾಡುವ ಸಂದರ್ಭ ಬಂದಲ್ಲಿ ಸಾಲಗಾರರು ಅಥವಾ ಇವರ ವಾರಸುದಾರರಿಗೆ ಮಾರಾಟದ ಆದ್ಯತೆ ನೀಡುವುದು.

**ಹರಾಜು ಕ್ರಯದ ಸ್ವತ್ತಿನ ಷೆಡ್ಯೂಲ್**

| | | |
|---|---|---|
| ನಗರ | : | ತುಮಕೂರು ಟೌನ್ |
| ವಾರ್ಡ್ ನಂ. | : | 24 |
| ಬಡಾವಣೆ | : | 3ನೇ ಅಡ್ಡರಸ್ತೆ, ಸೋಮೇಶ್ವರ ಬಡಾವಣೆ, ತುಮಕೂರು-572 103. |
| ಮುನಿಸಿಪಲ್ ಖಾತಾ ನಂ. ಹಾಗೂ ವಿಸ್ತೀರ್ಣ | : | (1) ಹಳೇ ಖಾತಾ ನಂ. 2675/1877 ಹಾಲಿ ಖಾತಾ ನಂ. 350/407<br>ಪೂರ್ವ - ಪಶ್ಚಿಮ : 112 ಅಡಿಗಳು<br>ಉತ್ತರ - ದಕ್ಷಿಣ : 27 ಅಡಿಗಳು<br>(2) ಹಳೇ ಖಾತಾ ನಂ. 1877/2675 ಹಾಲಿ ಖಾತಾ ನಂ. 351/408<br>ಪೂರ್ವ - ಪಶ್ಚಿಮ : 112 ಅಡಿಗಳು<br>ಉತ್ತರ - ದಕ್ಷಿಣ : 27 ಅಡಿಗಳು |

**ಶ್ರೀಮತಿ ಕೆ.ಎಸ್. ದಾಕ್ಷಾಯಿಣಿರವರ ಹೆಸರಿನಲ್ಲಿರುವ ನಿವೇಶನಕ್ಕೆ ಚಕ್ಕುಬಂದಿ:**
**(ಮುನಿಸಿಪಲ್ ಖಾತಾ ಸಂಖ್ಯೆ: 2675/1877, ಹಾಲಿ ಖಾತಾ ನಂ. 350/407)**

ಪೂರ್ವ - ಪಶ್ಚಿಮ : 112 ಅಡಿಗಳು
ಉತ್ತರ - ದಕ್ಷಿಣ : 27 ಅಡಿಗಳು

| | | |
|---|---|---|
| ಪೂರ್ವಕ್ಕೆ | : | ರಸ್ತೆ |
| ಪಶ್ಚಿಮಕ್ಕೆ | : | ಕನ್ಸರ್‌ವೆನ್ಸಿ |
| ಉತ್ತರಕ್ಕೆ | : | ಶ್ರೀ ಗುರುರಾಜರಾವ್‌ರವರ ಮನೆ |
| ದಕ್ಷಿಣಕ್ಕೆ | : | ಶ್ರೀಮತಿ ಕೆ.ಎಸ್. ಭಾರತಿರವರ ಸ್ವತ್ತು |

**ಶ್ರೀಮತಿ ಕೆ.ಎಸ್. ಭಾರತಿರವರ ಹೆಸರಿನಲ್ಲಿರುವ ನಿವೇಶನಕ್ಕೆ ಚಕ್ಕುಬಂದಿ:**
**(ಮುನಿಸಿಪಲ್ ಖಾತಾ ಸಂಖ್ಯೆ: 1877/2675, ಹಾಲಿ ಖಾತಾ ನಂ. 351/408)**

ಪೂರ್ವ - ಪಶ್ಚಿಮ : 112 ಅಡಿಗಳು
ಉತ್ತರ - ದಕ್ಷಿಣ : 27 ಅಡಿಗಳು

| | | |
|---|---|---|
| ಪೂರ್ವಕ್ಕೆ | : | ರಸ್ತೆ |
| ಪಶ್ಚಿಮಕ್ಕೆ | : | ಕನ್ಸರ್‌ವೆನ್ಸಿ |
| ಉತ್ತರಕ್ಕೆ | : | ಶ್ರೀಮತಿ ಕೆ.ಎಸ್. ದಾಕ್ಷಾಯಿಣಿರವರ ಸ್ವತ್ತು |
| ದಕ್ಷಿಣಕ್ಕೆ | : | ಶ್ರೀಮತಿ ಪ್ರೇಮಾ ಕುಮಾರಿರವರ ಸ್ವತ್ತು |

ಈ ಎರಡು ಸ್ಥಿರಾಸ್ತಿಗಳು ಅಕ್ಕಪಕ್ಕದ ಖಾಲಿ ನಿವೇಶನಗಳಾಗಿದ್ದು, ಇದರ ಒಟ್ಟು ಅಳತೆ ಪೂರ್ವ-ಪಶ್ಚಿಮ: 112 ಅಡಿಗಳು ಮತ್ತು ಉತ್ತರ - ದಕ್ಷಿಣ : 54 ಅಡಿಗಳ ವಿಸ್ತೀರ್ಣವುಳ್ಳ ಈ ಜಾಗಕ್ಕೆ ಚಕ್ಕುಬಂದಿ

| | | |
|---|---|---|
| ಪೂರ್ವಕ್ಕೆ | : | ರಸ್ತೆ |
| ಪಶ್ಚಿಮಕ್ಕೆ | : | ಕನ್ಸರ್‌ವೆನ್ಸಿ |
| ಉತ್ತರಕ್ಕೆ | : | ಶ್ರೀ ಗುರುರಾಜರಾವ್‌ರವರ ಮನೆ |
| ದಕ್ಷಿಣಕ್ಕೆ | : | ಶ್ರೀಮತಿ ಪ್ರೇಮಾ ಕುಮಾರಿರವರ ಸ್ವತ್ತು |

ಈ ಷೆಡ್ಯೂಲ್ ಸ್ಥಿರಾಸ್ತಿಗೆ ಹರಾಜಿನಲ್ಲಿ ಶ್ರೀಮತಿ ಕೆ.ಎಸ್. ಅನ್ನಪೂರ್ಣ ಕೋಂ ಕೆ.ವೈ. ಶಿವಣ್ಣ, ವಾಲ್ಮೀಕಿನಗರ, ತುಮಕೂರು ಇವರ ಹೆಸರಿಗೆ ರೂ.10,60,000-00 (ಹತ್ತು ಲಕ್ಷದ ಅರವತ್ತು ಸಾವಿರ ರೂಪಾಯಿಗಳು ಮಾತ್ರ) ಗಳಿಗೆ ಬಿಡ್ ನಿಲ್ಲಿಸಿರುತ್ತೆ ಹಾಗೂ ಬಿಡ್‌ದಾರರು ದಿನಾಂಕ: 29.9.2004 ರಂದು ಪೂರ್ಣ ಮೊತ್ತವನ್ನು ಡಿಕ್ರಿದಾರ ಬ್ಯಾಂಕಿಗೆ ಸಂದಾಯ ಮಾಡಿರುತ್ತಾರೆ. ಹರಾಜು ಬಾಬ್ತು ಬಿಡ್ ಹಣ ಬಿಡ್‌ದಾರರಿಂದ ಡಿಕ್ರಿದಾರ ಬ್ಯಾಂಕಿಗೆ ಬಾಕಿ ಇರುವುದಿಲ್ಲ. ಹರಾಜು ಷೆಡ್ಯೂಲ್ ಸ್ವತ್ತಿನ ಪೂರ್ಣ ಸ್ವಾಧೀನವನ್ನು ಬಿಡ್‌ದಾರರಿಗೆ ಈ ದಿನವೇ ಅಂದರೆ ದಿನಾಂಕ: 28.03.2005 ರಂದು ಕೊಟ್ಟಿರುತ್ತದೆ. ಇನ್ನು ಮುಂದೆ ಷೆಡ್ಯೂಲ್ ಸ್ವತ್ತಿನ ಎಲ್ಲಾ ಹಕ್ಕುಗಳ ಪ್ರಯೋಜನಗಳಿಗೆ ಶ್ರೀಮತಿ ಕೆ.ಎಸ್. ಅನ್ನಪೂರ್ಣ ಕೋಂ ಕೆ.ವೈ. ಶಿವಣ್ಣ, ತುಮಕೂರು ಇವರೇ ಪೂರ್ಣ ಹಕ್ಕುದಾರರಾಗಿಯೂ, ಉತ್ತರಾಧಿಕಾರಿಯೂ ಆಗಿರುತ್ತಾರೆ.

ದಿನಾಂಕ: 28.03.2005

ಸ್ಥಳ: ತುಮಕೂರು — ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿ (ನಿಯಮ 441)

ಪಿ.ಆರ್. 633 — ವೈಶ್ಯ ಕೋ-ಆಪರೇಟಿವ್ ಬ್ಯಾಂಕ್ ಲಿ., ತುಮಕೂರು.